ಶ್ರೀ

ಸರ್ಪಭೂಷಣ ಶಿವಯೋಗಿ

ವಿರಚಿತ

# ಕೈವಲ್ಯಕಲ್ಪವಲ್ಲರಿ

ಸಂಗ್ರಹ



ಪ್ರಕಾಶಕರು :

ಶ್ರೀ ಮೃತ್ಯುಂಜಯಸ್ವಾಮಿಗಳು ವಿರಕ್ತಮಠ

ಮುಮದಾಪೂರ

೧೯೫೪




ಬೆಲೆ : ೦-೧೨-೦



ಶ್ರೀ. ನಿ. ಪ್ರ. ಗುರುಬಸವಸ್ವಾಮಿಗಳು
ವಿರಕ್ತಮಠ, ಮುಮುದಾಪೂರ

# ಪ್ರಕಾಶಕರ ಮೊದಲಮಾತು

ಶಿವತತ್ತ್ವವನ್ನು ಅರಿದು, ಅನುಭವಿಸಿ, ಆಚರಿಸಿ ಸಮಸ್ತ ಮಾನವರಿಗೆ ಮಾರ್ಗದರ್ಶಕರಾದ ಅನೇಕ ಶಿವಶರಣರು, ಶಿವಯೋಗಿಗಳು ಕನ್ನಡನಾಡಿನಲ್ಲಿ ಜನಿಸಿರುವರು. ಅವರು ತಮ್ಮ ಅನುಭವವನ್ನು ಮುಂದಿನವರಿಗೆ ನಿಧಿಯನ್ನಾಗಿರಿಸಿದ್ದಾರೆ. ಅವರ ಅನುಭವಸಾಹಿತ್ಯವು ವಚನ, ರಗಳೆ, ಷಟ್ಪದಿ, ತ್ರಿಪದಿ, ಗೀತ ಮೊದಲಾದವುಗಳ ರೂಪದಲ್ಲಿ ಅಪಾರವಾಗಿದೆ. ಶಿವಶರಣರೂ ಶಿವಯೋಗಿಗಳೂ ಸಾಹಿತ್ಯವು ಜನಪ್ರಿಯವಾಗುವಂತೆ ಮಾಡಿ, ಜನತೆಯಲ್ಲಿ ಜ್ಞಾನಾಭಿವೃದ್ಧಿಯನ್ನುಂಟು ಮಾಡಿರುತ್ತಾರೆ.

ಶ್ರೀಮನ್ನಿಜಗುಣ ಶಿವಯೋಗಿಗಳವರ ಪ್ರಾಸಾದಿಕವಾಣಿಯಿಂದ ಹೊರಹೊಮ್ಮಿದ ಹಾಡುಗಬ್ಬಸಾಹಿತ್ಯವು ಸಂಗೀತ, ಸಾಹಿತ್ಯ ಮತ್ತು ತತ್ತ್ವಜ್ಞಾನಗಳಿಂದ ಪೂರ್ಣತೆಯನ್ನು ಪಡೆದು, ಮಾನವನ ಸುಪ್ತ ಚೇತನವನ್ನು ಜಾಗ್ರತಗೊಳಿಸಿ ನವಚೇತನವನ್ನುಂಟುಮಾಡುತ್ತದೆ. ಶ್ರೀ ಸರ್ಪಭೂಷಣ ಶಿವಯೋಗಿಗಳವರಾದರೂ ಶ್ರೀ ನಿಜಗುಣರ ಮಾರ್ಗವನ್ನನುಸರಿಸಿ ಸ್ಥಲಕಟ್ಟಿನ ಪದ್ಧತಿಯಂತೆ, (೧) ಶಿವಕಾರುಣ್ಯ ಪ್ರಾರ್ಥನಾಸ್ಥಲ, (೨) ಜೀವಸಂಬೋಧನಸ್ಥಲ, (೩) ನೀತಿಕ್ರಿಯಾಚರ್ಯಾಸ್ಥಲ, (೪) ಯೋಗಪ್ರತಿಪಾದನಸ್ಥಲ, (೫) ಜ್ಞಾನ ಪ್ರತಿಪಾದನ ಸ್ಥಲ ಎಂಬ ಐದು ಸ್ಥಲಗಳಿಂದೊಡಗೂಡಿದ “ ಕೈವಲ್ಯ ಕಲ್ಪವಲ್ಲರಿ ” ಎಂಬ ಉದ್ಗ್ರಂಥವನ್ನು ರಚಿಸಿ, ಯೋಗ ಮತ್ತು ಜ್ಞಾನ ಇವು ಸುಗಮವಾಗಿ ಕನ್ನಡಿಗರ ಅಂತರಂಗಕ್ಕೆ ಮುಟ್ಟುವಂತೆ ಮಾಡಿ ತತ್ತ್ವಜಿಜ್ಞಾಸುಗಳಿಗೆ ಮಹೋಪಕಾರಮಾಡಿರುತ್ತಾರೆ. ಈ ಸಂಪೂರ್ಣಗ್ರಂಥವನ್ನು ಬೆಂಗಳೂರ ಶ್ರೀ ಸರ್ಪಭೂಷಣ ಮಠಾ

ಧ್ಯಕ್ಷರಾದ ಶ್ರೀ ನಿ. ಪ್ರ. ಮಹಾದೇವಸ್ವಾಮಿಗಳವರು ಶ್ರೀ ಸರ್ವ ಭೂಷಣ ಗ್ರಂಥಮಾಲೆಯ ಪುಷ್ಪವನ್ನಾಗಿ ೫-೬ ವರ್ಷಗಳ ಹಿಂದೆ ಪ್ರಕಟಿಸಿರುವರು. ಇದಕ್ಕೆ ಲಿಂಗೈಕ್ಯ ಪ್ರೊ. ಶಿವಲಿಂಗಪ್ಪನವರು ಬಸವನಾಳ ಇವರು ಪರಿಶೋಧನೆಯಿಂದ ವಿಸ್ತೃತವಾದ ಪ್ರಸ್ತಾವನೆ ಯನ್ನು ಬರೆದಿರುವರು. ಮಹತ್ವದ ಈ ಗ್ರಂಥದ ಸಾರವು ಸರ್ವ ಜನರಿಗೂ ಮುಟ್ಟಲೆಂಬ ಸದುದ್ದೇಶದಿಂದ ಇದರ ಸಂಗ್ರಹವನ್ನು ಸಿದ್ಧಪಡಿಸಲಾಗಿದೆ.

ಈ ಸಂಗ್ರಹಗ್ರಂಥದ ಪ್ರಕಟನೆಗೆ ಪ್ರೇರಕರಾದ ಧಾರವಾಡ ಹಾವೇರಿಪೇಟೆಯ ಶ್ರೀ ಮುರುಘಾಮಠಾಧ್ಯಕ್ಷರೂ ಪರಮದಾಸೋಹ ಮೂರ್ತಿಗಳೂ ವೈರಾಗ್ಯಶೀಲರೂ ಆದ ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರನ್ನು ಸ್ಮರಿಸದೆ ಇರಲಾರೆವು. ಶ್ರೀ ಮಹಾಸ್ವಾಮಿ ಗಳವರು ತಮ್ಮ ಮಠದಲ್ಲಿ ವಿಜಯಸಂವತ್ಸರದ ಪುಷ್ಯ ಬಹುಳ ದಿಂದ ಮಾಘ ಪ್ರತಿಪದದ ವರೆಗೆ ಶ್ರೀ ನಿ. ಪ್ರ. ಮಹಾದೇವ ಸ್ವಾಮಿ ಗಳವರಿಂದ ಪ್ರತಿನಿತ್ಯ ಸಾಯಂಕಾಲ "ಕೈವಲ್ಯಕಲ್ಪವಲ್ಲರಿ"ಯ ಪಾಠ ಪ್ರವಚನವನ್ನು ಜರುಗಿಸಿ ಭಕ್ತರಿಗೆ ಅನುಭವಾಮೃತವನ್ನು ನೀಡಿದರು. ಪ್ರವಚನಾನಂತರದಲ್ಲಿ ಸಂಗ್ರಹಿತವಾದ ಪದ್ಯಗಳ ಸಂಕಲನವನ್ನು ಅಚ್ಚುಮಾಡಿ ಪ್ರಸಾರಮಾಡುವದುಚಿತವೆಂದು, ಶ್ರೀ ಮಹಾಸ್ವಾಮಿ ಗಳವರು ಅಪ್ಪಣೆ ಕೊಡಿಸಿದುದನ್ನು ಮನದಂದು ಕಾರ್ಯನಿರತರಾ ಗಿದ್ದೇವೆ.

ಕನ್ನಡ ನಾಡಿನಲ್ಲಿ ಇತಿಹಾಸಪ್ರಸಿದ್ಧವಾದ ವಿಜಾಪೂರ ಜಿಲ್ಲೆ ಯಲ್ಲಿ ಮಮದಾಪೂರ ಗ್ರಾಮವು ಮುಸಲ್ಮಾನ ಅರಸರ ಆಳಿಕೆಯಲ್ಲಿ 'ಮಹಮ್ಮದಪುರ' ವೆಂದು ಹೆಸರಾಗಿತ್ತು. ಇಲ್ಲಿ ದೊಡ್ಡ ಕೆರೆ ಇರುವದರಿಂದ ಇದಕ್ಕೆ ಕೆರೆಮಮದಾಪುರವೆಂಬ ಹೆಸರೂ ಬಂದಿ ರುತ್ತದೆ. ಇಲ್ಲಿಯ ವಿರಕ್ತಮಠವು ಸುಮಾರು ಮುನ್ನೂರು ವರ್ಷ

ಗಳಷ್ಟು ಪ್ರಾಚೀನವಾದುದೆಂಡು ಕೆಲ ಮುಸಲ್ಮಾನ ಅರಸರ ಸನದು ಗಳಿಂದ ತಿಳಿಯಬರುತ್ತದೆ ಈ ಮಠದ ಗುರುಪರಂಪರೆಯಲ್ಲಿ ಶ್ರೀ ಮುರುಘೇಂದ್ರಶಿವಯೋಗಿಗಳು, ಶ್ರೀ ಮುಪ್ಪಿನಸ್ವಾಮಿಗಳೇ ಮೊದಲಾದವರು ಆಗಿಹೋಗಿರುವರು. ಶ್ರೀ ಮುರುಘೇಂದ್ರಶಿವಯೋಗಿಗಳವರು ಮಹಾ ಶಿವಾನುಭಾವಿಗಳಾಗಿದ್ದು, ಅವರ ಜ್ಞಾನಸದನದಲ್ಲಿ ಅಥಣಿ ಗಚ್ಚಿನಮಠದ ಪರಮ ತಪಸ್ವಿಗಳಾದ ಶ್ರೀ ಶಿವಯೋಗಿಗಳವರೂ ಬಿಳ್ಳೂರು ವಿರಕ್ತಮಠದ ಶಿವಯೋಗಸಿದ್ಧರೂ ರಾಜಯೋಗಿಗಳಾಗಿದ್ದ ಶ್ರೀ ಗುರುಬಸವಸ್ವಾಮಿಗಳವರೇ ಮುಂತಾದವರೂ ಜ್ಞಾನ ಸಾಧನೆಯನ್ನು ಮಾಡಿದರೆಂದು ತಿಳಿದುಬರುತ್ತದೆ. ಆ ಮೇಲೆ ಶ್ರೀ ಮಠದ ಅಧ್ಯಕ್ಷರೂ ಪರಮಪೂಜ್ಯಗುರುವರ್ಯರೂ ಲಿಂಗಪೂಜಾ ನಿಷ್ಠರೂ ಪರಮವೈರಾಗ್ಯಶೀಲರೂ ಆದ ಲಿಂಗೈಕ್ಯ ಶ್ರೀ ನಿ. ಪ್ರ. ಗುರು ಬಸವ ಸ್ವಾಮಿಗಳು ಮಹಾನುಭಾವಿಗಳಾಗಿದ್ದು, ಶ್ರೀ ಸರ್ಪಭೂಷಣ ಶಿವಯೋಗಿಗಳವರ ಹಾಡುಗಬ್ಬಗಳನ್ನು ಅಪಾರಪ್ರೀತಿಯಿಂದ ಅಭ್ಯಾಸ ಮಾಡಿ, ನಿತ್ಯ ಜನತೆಗೆ ಜ್ಞಾನವನ್ನು ಬೋಧಿಸುತ್ತಿದ್ದರು. ಅವರಿಗೆ ಈ ಗ್ರಂಥವು ಬಹಳ ಪ್ರಿಯವಾಗಿತ್ತು. ಅವರ ಪುಣ್ಯಸ್ಮರಣಾರ್ಥವಾಗಿ ಶ್ರೀ ಸರ್ಪಭೂಷಣಮಠಾಧ್ಯಕ್ಷರಾದ ಶ್ರೀ. ನಿ. ಪ್ರ. ಮಹಾದೇವ ಸ್ವಾಮಿಗಳವರ ಅನುಮತಿಪಡೆದು ಈ ಸಂಗ್ರಹಗ್ರಂಥಪ್ರಕಟನೆಗೆ ಪ್ರಯತ್ನಿಸಿದ್ದೇವೆ.

ಕೊನೆಯದಾಗಿ ನಮ್ಮ ಕೋರಿಕೆಯನ್ನು ಮನ್ನಿಸಿ ಪ್ರಸ್ತಾವನೆಯನ್ನು ಬರೆದುಕೊಟ್ಟ ಪ್ರೊ. ಆರ್. ಸಿ. ಹಿರೇಮಠ ಇವರಿಗೆ ಆಭಾರಿಯಾಗಿದ್ದೇವೆ. ಈ ಗ್ರಂಥಪ್ರಕಟನೆಯ ಕಾಲದಲ್ಲಿ ಎಲ್ಲ ರೀತಿಯಿಂದಲೂ ಯೋಗ್ಯ ಸಲಹೆಗಳನ್ನಿತ್ತು ಹರಸಿದ ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳವರನ್ನು ಮತ್ತೊಮ್ಮೆ ಸ್ಮರಿಸದೆ ಇರಲಾರೆವು. ಈ ಪುಸ್ತಕವನ್ನು ಧಾರವಾಡ ಲಿಂಗರಾಜ ಆರ್ಟ ಮುದ್ರಣಾಲಯದ ಒಡೆಯರಾದ ಶ್ರೀ ಬಿಳಗಿ ಬಂಧುಗಳು ಶ್ರೀ ಶಿವಯೋಗಿಗಳವರ

ಕಾರ್ಯವೆಂದು ಭಾವಿಸಿ ಅನನ್ಯಭಕ್ತಿಯಿಂದ ಅಂದವಾಗಿ ಮುದ್ರಿಸಿ ಕೊಟ್ಟರು. ಈ ಪುಸ್ತಕಪ್ರಕಟನೆಯ ಕಾರ್ಯದಲ್ಲಿ ನೆರವಾದ ಸರ್ವರಿಗೂ ಶ್ರೀ ಸರ್ಪಭೂಷಣಶಿವಯೋಗಿಗಳು ಶ್ರೇಯಸ್ಸನ್ನುಂಟು ಮಾಡಲೆಂದು ಹಾರೈಸುತ್ತೇವೆ.

ಮುಮುದಾಪೂರ
ಶ್ರಾವಣ ಬ. ೧೦, ೧೯೫೪

ಶ್ರೀ ಮೃತ್ಯುಂಜಯಸ್ವಾಮಿಗಳು
ವಿರಕ್ತಮಠ, ಮುಮುದಾಪೂರ

# ಪ ರಿ ವಿ ಡಿ



## ಚಿ ತ್ರ ಗ ಳು

# ಕೈವಲ್ಯಕಲ್ಪವಲ್ಲರಿ

## ಸಂಗ್ರಹ

## ಪ್ರಸ್ತಾವನೆ

ಉಜ್ವಲ ಪ್ರತಿಭಾಸಂಪನ್ನರೂ ಅನುಪಮ ಪ್ರಭಾವಪೂರ್ಣರೂ ಆದ ಹಲವು ವ್ಯಕ್ತಿಗಳ ಹೆಸರಿನಲ್ಲಿ ಕನ್ನಡ ಸಾಹಿತ್ಯಚರಿತ್ರೆಯನ್ನು ವಿಭಜಿಸುವುದಾದರೆ ಅಲ್ಲಿ 'ನಿಜಗುಣಯುಗ' ವೊಂದನ್ನು ನಿರ್ವಿವಾದವಾಗಿ ಕಲ್ಪಿಸಬಹುದು. ಕನ್ನಡ ಸಾಹಿತ್ಯದಲ್ಲಿ ದೇದೀಪ್ಯಮಾನವಾಗಿ ಕಂಗೊಳಿಸುವ ಗೀತಗಳ ಪರಂಪರೆಗೆ ನಿಜಗುಣಶಿವಯೋಗಿಗಳೇ ಆದ್ಯರು. ಹಾಡುಗಬ್ಬಗಳ ಯುಗ ಹನ್ನೆರಡನೆಯ ಶತಮಾನದಲ್ಲಿಯೇ ಆರಂಭವಾಗಿದ್ದರೂ ಆ ಸಾಹಿತ್ಯ ಷಟ್ಪದಿ, ತ್ರಿಪದಿ ಮುಂತಾದ ದ್ರಾವಿಡಛಂದಸ್ಸಿನ ಗತಿಯಲ್ಲಿ ಸಾಗಿದ್ದಿತು. ಕರ್ನಾಟಕ ಸಂಗೀತಕ್ಕೆ ಜೀವಕಳೆಯನ್ನಿತ್ತ ನಿಜಗುಣಶಿವಯೋಗಿಗಳು ವಿವಿಧ ರಾಗಗಳಲ್ಲಿ ತತ್ತ್ವಗೀತೆಗಳನ್ನು ರಚಿಸಿ, ಗೀತಗಳ ಹೊಸ ಯುಗವನ್ನೇ ಆರಂಭಿಸಿದರು. ಹದಿಮೂರನೆಯ ಶತಮಾನದಲ್ಲಿ ನರಹರಿತೀರ್ಥರು ಇಂತಹ ಕೆಲವು ಗೀತಗಳನ್ನು ರಚಿಸಿದ್ದರೂ ಆ ಸಂಪ್ರದಾಯ ಅಂದಿನಿಂದ ಮುಂದುವರಿಯಲಿಲ್ಲ. ನಿಜಗುಣಶಿವಯೋಗಿಗಳ ಕೈವಲ್ಯಪದ್ಧತಿ, ಪರಮಾನುಭವಬೋಧೆ, ಪಾರಮಾರ್ಥಿಕಪ್ರಕಾಶಿಕೆ ಮುಂತಾದ ಗ್ರಂಥಗಳ ಉದಯದ ತಿಳಿವೆಳಗಿನಲ್ಲಿ ಗೀತಗಳ ಸಂಪ್ರದಾಯ ಮೊದಲಾಯಿತು; ಮುಂದುವರಿಯಿತು. ವೀರಶೈವ

ಶಿವಯೋಗಿಗಳೂ[1] ವೈಷ್ಣವ ದಾಸರೂ[2] ಈ ಗೀತವಾಙ್ಮಯಕ್ಕೆ ಉಜ್ವಲವಾದ ಕಾಣ್ಕೆಯನ್ನರ್ಪಿಸಿರುವರು. ಹೀಗೆ ಅನುಭಾವದ ಅಮೃತ, ತಪಸ್ಸಿನ ತೇಜ ಇವುಗಳಿಂದ ಕನ್ನಡ ಸಾಹಿತ್ಯ, ಸಂಸ್ಕೃತಿಗಳನ್ನು ಉದ್ಧರಿಸಿದ ಪುಣ್ಯಪುರುಷರಲ್ಲಿ ಸರ್ಪಭೂಷಣಶಿವಯೋಗಿಗಳ ಸ್ಥಾನ ಘನವಾದುದು.

ಸರ್ಪಭೂಷಣಶಿವಯೋಗಿಗಳು ಕ್ರಿ. ಶ. ೧೭೯೫ ರಿಂದ ೧೮೩೯ ರ ವರೆಗೆ ಜೀವಿಸಿದ್ದರು. ಅವರ ವ್ಯಕ್ತಿತ್ವ ವಿಲಕ್ಷಣವಾದುದು. ಬಾಲ್ಯದಲ್ಲಿ ತುಂಟರಂತೆ ಕಂಡು, ಗುರುಕೃಪೆಯಾದನಂತರ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಅಪಾರವಾದ ಪಾಂಡಿತ್ಯವನ್ನು ಸಂಪಾದಿಸಿದರು. ವಿರಕ್ತಾಶ್ರಮವನ್ನು ಸ್ವೀಕರಿಸಿ ವೈರಾಗ್ಯಶಿರೋಮಣಿಗಳಾದರು. ಪರಮಶಿವಯೋಗಿಗಳಾಗಿ ಲಿಂಗಾಂಗಸಾಮರಸ್ಯದ ಸ್ಥಿತಿಯನ್ನು ಪಡೆದರು. ದೇಶದಾದ್ಯಂತ ಪ್ರವಾಸ ಮಾಡಿ, ಅನುಭವದ ಗೀತೆಗಳನ್ನು ಹಾಡಿ ಜನತೆಯ ಜೀವನವನ್ನು ಉದ್ಧರಿಸಿದರು. ಸರ್ಪಭೂಷಣಶಿವಯೋಗಿಗಳು ರಚಿಸಿದ ಕೈವಲ್ಯಕಲ್ಪವಲ್ಲರಿ ಹಾಗೂ ಸಂಸ್ಕೃತದ ಜ್ಞಾನಶತಕ ಇವು ಶಿವಯೋಗಿಗಳು ಸಾಧಿಸಿದ ಆತ್ಮಸಿದ್ಧಿ, ಲೋಕಕಲ್ಯಾಣಗಳನ್ನು ಕನ್ನಡಿಸುತ್ತವೆ. ‘ ಕೈವಲ್ಯಕಲ್ಪವಲ್ಲರಿ ’ ಗೆ ಸರ್ಪಭೂಷಣಶಿವಯೋಗಿಗಳ ಜೀವನಕುಸುಮಗಳರಳಿ ಪರಮಾನುಭವದ ಪರಿಮಳವನ್ನು ಸೂಸುತ್ತವೆ. ಶಿವಯೋಗಿಗಳ ದಿವ್ಯಸಂದೇಶವನ್ನು ಸಾರುತ್ತವೆ.

೧ ಮುಪ್ಪಿನ ಷಡಕ್ಷರಿ, ಮೈಲಾರದ ಬಸವಲಿಂಗ ಶರಣರು, ಘನಮಠದ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು ಮುಂತಾದವರು.

೨ ಪುರಂದರದಾಸ, ಕನಕದಾಸ, ಜಗನ್ನಾಥದಾಸ, ವಿಜಯದಾಸ ಮೊದಲಾದವರು.

ಜೀವಾತ್ಮನು ಪರಮಾತ್ಮನನ್ನು ಮರೆದು ಧರೆಗೆ ಬಂದು, ಸಂಸಾರವೆಂಬ ಉರಿವಕಿಚ್ಚಿನಲ್ಲಿ ಬೆಂದುಹೋಗುತ್ತಿರುವದನ್ನು ನೆನೆದು ಶ್ರೀಗಳವರು ಪರಮಾತ್ಮನಲ್ಲಿ ಮೊರೆಯಿಡುತ್ತಾರೆ. ಅವರ ಆ ಪ್ರಾರ್ಥನೆಯಲ್ಲಿ ಸಮಸ್ತ ಮಾನವಕುಲದ ಹೃದಯವೀಣೆಮಿಡಿದಿರುತ್ತದೆ.

‘ ಪಂಚೇಂದ್ರಿಯಗಳ ಉರುಳಿನೊಳಗೆ ಸಿಲುಕಿ ಮುಂದನರಿಯದಧಮನಾದೆ ’

‘ ಪರರ ಗುಣವನೆಣಿಸಿ ಜರಿಯುತೆ । ಕಣ್ಣಲ್ಲಿ ಕಂಡ
ಸರುವ ವಿಷಯಗಳಿಗೆ ಹರಿಯುತೆ.
ಬರಿದೆ ಕೆಡುವ........ ’

ಅಂಗದ ಸ್ಥಿತಿಯನ್ನು ಲಿಂಗದ ಮೇಗಣ ನಿಷ್ಠೆಯಿಂದ, ಶಿವಯೋಗದ ಸಾಧನೆಯಿಂದ ಕಳೆಯಬೇಕೆಂದು ಶಿವಯೋಗಿಗಳ ಮತ. ಕಾಯ ಕಾಂತಾರವನ್ನು ಹೊಕ್ಕು ಅಲ್ಲಿರುವ ಕ್ರೂರ ಮೃಗಗಳ ಬೇಟೆಯಾಡಬೇಕೆನ್ನುವರು. ಶರಿರವೆಂಬ ಹೊಲವ ಹಸನಮಾಡಿ ಪರತತ್ವದ ಬೆಳೆಯ ಬೆಳೆದುಣ್ಣಬೇಕೆನ್ನುವರು. ಶಿವಯೋಗಿಗಳ ಪ್ರಾರ್ಥನೆಯಲ್ಲಿ ವಿಶ್ವದ ವೀಣೆ ಮಿಡಿದಂತೆ ಅವರ ಸಂದೇಶದಲ್ಲಿ ಸಮಸ್ತ ಲೋಕದ ಹಿತವಡಗಿದೆ. ತಮ್ಮ ಜೀವನದಲ್ಲಿ ಇಂತಹ ಕೃಷಿಯ ಮಾಡಿ ಪರತತ್ತ್ವದ ಬೆಳೆಯನ್ನು ಅವರು ಬೆಳೆದಿದ್ದರು. ಶ್ರೀ ಗಿರಿಯ ಸುಕ್ಷೇತ್ರವನ್ನು ಶರಿರದಲ್ಲಿಯೇ ಕಂಡು, ಅದನ್ನೇರಿ ಬೆಳಗನ್ನು ಕಂಡಿದ್ದರು. ಇಂತಹ ಪರಮಾನುಭಾವದ ದಿವ್ಯವ್ಯಕ್ತಿತ್ವವನ್ನು ಪಡೆದ ಶಿವಯೋಗಿಗಳ ಅಂಗಕ್ರೀಗಳೆಲ್ಲ ಲಿಂಗಕ್ರೀಗಳಾದುದರಿಂದ, ಅವರ ಮಾತು ಜ್ಯೋತಿರ್ಲಿಂಗವಾಗಿದೆ; ಮನಸ್ಸು ವಿಶ್ವದಷ್ಟು ವಿಶಾಲವಾಗಿದೆ. ಅಂತೆಯೇ ಶಿವಯೋಗಿಗಳು ಅಭಿವಂದಿಸುವುದು ನಾಮರೂಪ ಕ್ರಿಯೆ

ಯಳಿದ, ಇಂದ್ರಾಚ್ಯುತಹರವಿಧಿಮುಖನಿರ್ಜರರಿಗೆ ತೇಜವನ್ನು ಕೊಟ್ಟ ಪರಮಾತ್ಮನನ್ನು. ಇಲ್ಲಿ ಶಿವಯೋಗಿಗಳ ಘನವಾದ ವ್ಯಕ್ತಿತ್ವವನ್ನೂ ವಿಶಾಲದೃಷ್ಟಿಯನ್ನೂ ಕಾಣಬಹುದು.

ಸರ್ಪಭೂಷಣ ಶಿವಯೋಗಿಗಳಿಗೆ ಕನ್ನಡಸಾಹಿತ್ಯದಲ್ಲಿ ಶಾಶ್ವತವಾದ ಸ್ಥಾನ ಸಂದಿದೆ. ಅವರ ಕಾವ್ಯಶಕ್ತಿ ಹಿರಿದಾಗಿದೆ; ಅನುಭವ ಆಳವಾಗಿದೆ. ತಮ್ಮ ದಿವ್ಯಾನುಭಾವವನ್ನು ಸದಾ ಕಾವ್ಯವಾಣಿಯಲ್ಲಿಯೇ ಬಿತ್ತರಿಸುವರು.

‘ ಅನುಭಾವದಡಿಗೆಯ ಮಾಡಿ ’
‘ ಕಾಯಕಾಂತಾರವ ಹೊಕ್ಕು ಬೇಂಟೆಯನಾಡಿ ’

ಇಂತಹ ಅನೇಕ ಪದಗಳು ಉತ್ತಮ ಕಾವ್ಯದ ನಿದರ್ಶನವಾಗಿವೆ. ಸರ್ವರ ಅನುಭವದ ವಿಷಯಗಳನ್ನು ಸುಂದರವಾದ ರೀತಿಯಲ್ಲಿ ಹೇಳಿ, ಉತ್ತಮ ಕಾವ್ಯವನ್ನು ಹುಟ್ಟಿಸುವ ಶಕ್ತಿ ಶ್ರೀ ಗಳವರ ಪರುಷ ಹಸ್ತಕ್ಕಿದೆ. ಅವರು ಶಿವನ ಮಹಿಮೆಯನ್ನು ಬಣ್ಣಿಸುವ ರೀತಿಯನ್ನು ನೋಡಬಹುದು.

ಪರಿಶುದ್ಧ ನೆಂಬೆನೆ ಪಸಿದೊವಲುಟ್ಟಿಹೆ.
ಸಿರಿವಂತನೆಂಬೆನೆ ತಿರಿಕೊಂಬೆ. ಶಿವನೇ
ಕಲಿಯೆಂಬುವೆನೆ ಬಿಲ್ಲ ಪೆಟ್ಟನೆ ತಿಂದಿಹೆ.

ಈ ಉಕ್ತಿವೈಚಿತ್ರ್ಯದಲ್ಲಿ ಕವಿಯ ಸುಂದರವಾದ ಶೈಲಿಯನ್ನು ಕಾಣಬಹುದು. ಶ್ರೀಗಳವರ ಭಾವಗೀತೆಗಳು ಒಮ್ಮೆಲೆ ನಮ್ಮೆಲ್ಲರ ಹೃದಯವನ್ನು ಪ್ರವೇಶಿಸಿ ಅನುಕಂಪವನ್ನುಂಟುಮಾಡುತ್ತವೆ.

‘. ರಕ್ಷಿಸದಿಹೆ ದೇವರೇ ನೀನಿಂತಪ್ಪ
ಪಕ್ಷಪಾತವ ಮಾಳ್ಪರೇ ’
‘ ಪಾಲಿಸಯ್ಯ ಪಾರ್ವತೀಶ್ವರ ’

ಇಂತಹ ಪ್ರಾರ್ಥನೆಗಳಲ್ಲಿ ಕರುಣರಸ ತುಂಬಿ ತುಳುಕುತ್ತದೆ. ತಮ್ಮ ದಿವ್ಯಾನುಭವವನ್ನು ಲೋಕಾನುಭವಕ್ಕೆ ಹೊಂದಿಸಿ ಹೇಳಿರುವುದೊಂದು ಸರ್ಪಭೂಷಣಶಿವಯೋಗಿಗಳವರ ಶೈಲಿಯ ವೈಶಿಷ್ಟ್ಯ. ಇವರ ಲೋಕಾನುಭವವೂ ಅಷ್ಟೇ ತೀವ್ರತರವಾಗಿರುವುದು ಇದಕ್ಕೆ ಕಾರಣ ವೆನ್ನಬಹುದು. ಶೃಂಗಾರವು ಶಿವಭಕ್ತಿಯಾಗಿ ಮಾರ್ಪಡುವ ರೀತಿ ಯಲ್ಲಿ, ನವಭಕ್ತಿಯಿಂ ನವಪ್ರಕೃತಿನವಗುಣವಳಿವ ರೀತಿಯಲ್ಲಿ ಶಿವಯೋಗಿಗಳು ಲೋಕಾನುಭವ, ಆತ್ಮಾನುಭವಗಳನ್ನು ಹೊಂದಿಸಿ ಹೇಳುತ್ತಾರೆ.

ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಸರ್ಪಭೂಷಣ ಶಿವಯೋಗಿ ಗಳವರಿಗೆ ಪ್ರಭುತ್ವವಿರುವುದರಿಂದ ಅವುಗಳ ಸಮನ್ವಯದ ಸುಂದರ ಶೈಲಿಯನ್ನು ಕೈವಲ್ಯಕಲ್ಪವಲ್ಲರಿಯಲ್ಲಿ ಕಾಣಬಹುದು.

ಶ್ರೀಗುರುವರೇಣ್ಯಭವದಂಘ್ರಿಪಂಕೇರುಹಗ
ಳೇಗಳೆನ್ನೆರ್ದೆಗೊಳದೊಳಗಲದಿರುತಿರ್ಕೆ

ಕೈವಲ್ಯಕಲ್ಪವಲ್ಲರಿಯ ಮೊದಲನೆಯ ಚರಣದಲ್ಲಿಯೇ ಕನ್ನಡ ಸಂಸ್ಕೃತಗಳ ಮಧುರಮಿಲನವನ್ನು ಕಾಣಬಹುದು. ಮೊದಲನೆಯ ಚರಣದಲ್ಲಿ ಸಂಸ್ಕೃತ ಪದಗಳನ್ನೇ ಹೆಣೆದ ರೀತಿಯನ್ನೂ ಎರಡನೆಯದ ರಲ್ಲಿ ಕನ್ನಡಪದಗಳನ್ನು ಒಂದುಗೂಡಿಸಿದ ಬಂಧವನ್ನೂ ನೋಡ ಬೇಕು. ಭಾವಕ್ಕೆ ತಕ್ಕಂತೆ ಪದಗಳ ಶೈಲಿಯಲ್ಲಿ ವೈವಿಧ್ಯ ತೋರಿ ಬರುತ್ತದೆ. ಅನುಭಾವದ ಆಳ, ವೈಶಾಲ್ಯ, ಎತ್ತರ; ತತ್ತ್ವಜ್ಞಾನದ ಬೆಳಗು, ಕಾವ್ಯದ ಕಣ್ಣು, ಶೈಲಿಯ ಸೊಗಸು, ಸಂಗೀತದ ಮೆರಗು ಇವೆಲ್ಲವುಗಳಿಂದ ಕೈವಲ್ಯ ಕಲ್ಪವಲ್ಲರಿಯ ಗೀತಗಳಿಗೆ ಕನ್ನಡ ಸಾಹಿತ್ಯ ದಲ್ಲಿ ಉನ್ನತವಾದ ಸ್ಥಾನವಿದೆ.

ನಮ್ಮ ನಾಡವರ ಉಸಿರಲ್ಲಿ ಕೈವಲ್ಯಕಲ್ಪವಲ್ಲರಿಯ ಅನೇಕ ಪದಗಳು ಬೆರೆತು ಹೋಗಿರುವುದು, ಅವುಗಳ ಘನತೆಯ ದ್ಯೋತಕ

ವಾಗಿದೆ. ವೀರಶೈವರಂತೆ ಸಮಸ್ತ ಕನ್ನಡಿಗರಿಗೂ ಅವು ಪ್ರಿಯಕರ ವಾಗಿವೆ. ಸರ್ಪಭೂಷಣಶಿವಯೋಗಿಗಳಿಗೆ ಇಂತು ಕನ್ನಡಿಗರ ಹೃದಯದಲ್ಲಿ ಶಾಶ್ವತವಾದ ಸ್ಥಾನವಿದೆ.

ಕೈವಲ್ಯಕಲ್ಪವಲ್ಲರಿ ಇದೀಗ ಸಂಗ್ರಹವಾಗಿ ಪ್ರಕಟವಾಗುತ್ತಿರುವುದು, ಸಮಸ್ತ ಕನ್ನಡಿಗರಿಗೂ ಇದರ ಸಾರಸಾರಾಯ ಮುಟ್ಟಲೆಂದು. ಬಹುಜನಪ್ರಿಯವಾದ, ವಿಶ್ವನೀತಿ- ವಿಶ್ವಸಂದೇಶಗಳನ್ನೊಳಗೊಂಡ, ಸರ್ಪಭೂಷಣಶಿವಯೋಗಿಗಳ ಉತ್ತಮೋತ್ತಮಗೀತಗಳನ್ನು ಜನ ಬದುಕಬೇಕೆಂಬ ಭಾವನೆಯಿಂದ ಸಂಗ್ರಹಿಸಿ ಪ್ರಕಟಿಸಲಾಗಿದೆ. ಕನ್ನಡಿಗರು ಇದನ್ನು ಸ್ವಾಗತಿಸುವರೆಂದು ನೆರೆನಂಬಲಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಅಗಸ್ಟ ೨೧, ೧೯೫೪

ಆರ್. ಸಿ. ಹಿರೇಮಠ




ಶ್ರೀ ಸರ್ಪಭೂಷಣ ಶಿವಯೋಗಿಗಳವರ ಗದ್ದುಗೆ
ಸರ್ಪಭೂಷಣಮಠ, ಬೆಂಗಳೂರು

॥ ಶ್ರೀಗುರು ಬಸವಲಿಂಗಾಯ ನಮಃ ॥

ಶ್ರೀ ಸರ್ಪಭೂಷಣ ಶಿವಯೋಗಿ
ಕೃತ

# ಕೈವಲ್ಯ ಕಲ್ಪವಲ್ಲರಿ

## ಸಂಗ್ರಹ

### ಶಿವಕಾರುಣ್ಯ ಪ್ರಾರ್ಥನಾ ಸ್ಥಳ

❋

### ಶ್ರೀಗುರುವರೇಣ್ಯ ಭವದಂಘ್ರಿಪಂಕೇರುಹಗ

ರಾಗ—ನಾಟಿ

ಶ್ರೀಗುರುವರೇಣ್ಯ ಭವದಂಘ್ರಿಪಂಕೇರುಹಗ
ಳೀಗಳೆನ್ನೆರ್ದೆಗೊಳದೊಳಗಲದಿರುತಿರ್ಕೆ ॥ಪಲ್ಲವಿ॥

ಹರಚರಣನಿಷ್ಠೆಯೊದವಿಸಿ ಸುಕರ್ಮದ ವಿಧಿಯ
ನೊರೆದು ಕಲುಷಗಳಿಗಳುಕಿಸಿ ಭೂತಗಳೊಳು
ಕರುಣವೊಗೆಯಿಸಿ ಸತ್ಯವಿಡಿಸಿ ಮನುಮಯಸುಧೆಯ
ನೆರೆದು ಸುಕೃತದ ಸರಣಿಗೆನ್ನ ತಿರುಗಿಸಿದ ೧

ಶಮೆದಮೆಯನುಸಿರ್ದು ಸತಿಸುತಮುಖ್ಯವಿಷಯಗಳ
ಮಮತೆಯನು ಬಿಡಿಸಿ ಸಜ್ಜನರ ಸಂಗದೊಳೆ
ರಮಿಸೆಂದು ಪೇಳಿ ಲೌಕಿಕವಾದವಶ್ಯಗಳ-
ಭ್ರಮೆಯುಳಿಸಿ ವಿರತಿಸಂಪದವ ಕರುಣಿಸಿದ ೨

ಹಿತವಿದಹಿತವಿದೆಂದು ತಿಳಿಪಿಯನೃತವನಳಿಸಿ-
ಮತಿಯ ಮಲಿನವ ತೊಳೆದು ಸಮತೆಯುಳವಡಿಸಿ
ಶ್ರುತಿಸೂಕ್ತಿಯೊಲವಿತ್ತು ವಿಕೃತಿಯನು ಕೆಡಿಸಿ ಸದು-
ಗತಿಯುಪೇಕ್ಷೆಯನೆನ್ನ ಮನದೆ ಮೊಳೆಯಿಸಿದ ೩

ಮರಹನಿಲ್ಲೆನಿಸಿ ಮಹದಹಮಾದಿವಿವರಣೆಯ-
ನರಿಪಿ ಬಹುಮುಖವ ತವಿಸೇಕಭಾವನೆಯ
ಕರಿಗೊಳಿಸಿ ಪೂರ್ಣದನುಮತಿಗೊಟ್ಟು ಸಂಶಯವ-
ಹರಿಸಿ ಸಹಜಾನುಭವದಿರವನೊದವಿಸಿದ ೪

ಜೀವೇಶರೈಕ್ಯದನುವನು ತೋರಿ ಸಂಸೃತಿಯ
ದಾವತಿಯ ಕಳೆದು ಘನಮುಕ್ತಿಯೆಂದೆಂಬ
ಭಾವೆಯೊಡವೆರಸಿ ನಿಜಸುಖವಿತ್ತು ಗುರುಸಿದ್ಧ
ದೇವನೆನಿಸುವ ನಿರಾಭಾರಿ ಗುರುತಿಲಕ ೫

## ಆ ದೇವನ ಪದಪದ್ಮವನಾವಗಮುಭಿವಂದಿಸುವೆನು

ರಾಗ—ಸಾಳಂಗ

ಆ ದೇವನ ಪದಪದ್ಮವನಾವಗಮುಭಿವಂದಿಸುವೆನು
ಮೂದೇವರ ನಾಮಕ್ರಿಯೆರೂಪುಗಳಳಿದುಳಿದ ॥ಪಲ್ಲವಿ॥

ಆವನ ಲೇಶಗಳಿಂದ್ರಾಚ್ಯುತಹರವಿಧಿಮುಖನಿರ್ಜರ-
ರಾವನ ಭಾಸಾಂಶಗಳಿನಶಶಿಮುಖತೇಜಗಳು
ಆವನು ಮಹದಹಮಾದಿಮುಬುದ್ಬುದಗಳಿಗಂಬುಧಿಯಹ-
ನಾವನ ಸತ್ತಾದ್ಯಂತದ ಕೋಟಿಯ ದಾಟಿಹುದು ೧

ಆವನ ಜಠರದೊಳಬ್ಜಭವಾಂಡಾಯತಕೋಟಿಗಳಿಹು
ವಾವನನುಪಧಾವಿಸುವುವು ಶ್ರುತಿತತಿಸೂಕ್ತಿಗಳು
ಆವನಜಾದಿತೃಣಾಂತಾಖಿಲಜಡವಿಶ್ವನಿಯಾಮಕ
ನಾವನ ಸನ್ನಿಧಿವಿಡಿದೀ ಸೃಷ್ಟ್ಯಾದಿಗಳಿಹುದು ೨

ಆವಗೆ ತೃಟಿಗೊರೆಯಾಗವು ಸಲಿಲಜಭವಶತಕಲ್ಪಗ-
ಳಾವನ ಮನುಕೋಟಿಗಳೇಳ್ಗೊಲಿದರ್ಥೈಸುವುವು
ಆವನಖಿಲಯುಮಿತಾರಾಸಪ್ತಕದಗ್ರದೆ ಘೋಷಿಪ
ನಾವನು ಗುರುಸಿದ್ಧನೆಯಾಗೆನ್ನನು ಬೋಧಿಸಿದಂ ೩

## ಬಸವಾದಿಪ್ರಮಥರ ಚರಣಸಾರಸಗಳಿ

ರಾಗ—ಶಂಕರಾಭರಣ

ಬಸವಾದಿಪ್ರಮಥರ ಚರಣಸಾರಸಗಳಿ
ಗೊಸೆದೆನ್ನ ಮನವನಾರಡಿಗೈವೆನು
ವಿಸುನಿಯೇ ತೊಡವಾಗಿ ಬಹುನಾಮವಾಂತಂತೆ
ಪಶುಪತಿಯಪರಾವತಾರರೆಂದೆನಿಸುವ ‖ಪಲ್ಲವಿ‖

ಶಿವನ ಚಿದ್ಧರ್ಮವೇ ಶರಣರಾಳ್ತನಗೊಂಡ
ಶಿವತತ್ತ್ವದನುವ ಭೂಮಿಗೆ ಬಿತ್ತಿದ
ಶಿವನೆ ಮಾನುಷ್ಯದಿಂ ಮಾಯೆಯನಿಳಿಕೈದ
ಶಿವನ ರೌದ್ರಾವೇಶರಸವೊಂದೆ ಕರುವಾದ ೧

ಲಿಂಗದಿಂ ನೃಪಗೆ ಸಾಕ್ಷಿಯ ಕೊಟ್ಟ ತನ್ನಿಷ್ಟ
ಲಿಂಗದಿಂ ಪೆರ್ಗೂಪವಗುಳಿಸಿದ
ಲಿಂಗಕ್ಕೆ ಪ್ರತ್ಯಕ್ಷಮುಣಿಸಿತ್ತ ಕರಪದ್ಮ
ಲಿಂಗದೆ ತನುವನಡಗಿಸುತೆ ಬಯಲಾದ ೨

ಮೃಡಬಲಿಪೂಗೊಂಡ ಸತಿಯ ಕೈಗಡಿದಿಟ್ಟ
ಮೃಡನಿಗೆ ಜಡೆಯು ನಲ್ಸೊಡರೆತ್ತಿದ
ಮೃಡನಿಗೋಸುಗ ತನೂಜನನೆ ಬಾಣಸಗೈದ
ಮೃಡನನೇಳಿಸಿದಾತ್ಮಪಿತನ ಸಂಹರಿಸಿದ ೩

ಹರನನ್ನೆ ಹೊರಗೆಂದು ಬೇಡೆ ಮತ್ತೊಳಕೈದ
ಹರನೆ ಬಾರೆನೆಲೊಲ್ಲೆನೆನುತಟ್ಟಿದ
ಹರನಿಗಂ ವೀರಶೈವೋಪದೇಶವನಿತ್ತ
ಹರನ ಕೈಲಾಸಪುರವೆಲ್ಲ ಕೋಳ್ಗೊಂಡ ೪

ಈ ರೀತಿಯೊಳು ಮೇಘದಿಂ ಬಂದು ಪೊಳೆಯಿಂದೆ
ವಾರಿವಾರ್ಧಿಯ ಮತ್ತೆ ಬೆರೆಯುವಂತೆ
ಶಾರೀರವಿಡಿದೈದಿ ನಟಿಸುತ್ತೆ ಶಿವಭಕ್ತಿ
ದ್ವಾರದಿಂ ಗುರುಸಿದ್ಧನೊಡನೈಕ್ಯರಾದಂಥ ೫

## ಶಿವಶಿವಾ ಎನು ಕಂಡಾ ನಿಮಿಷಾರ್ಧವೆಡೆಬಿಡದೆ

ರಾಗ—ತೆನುಗು ಕಾಂಬೋದಿ

ಶಿವಶಿವಾ ಎನು ಕಂಡಾ ನಿಮಿಷಾರ್ಧವೆಡೆಬಿಡದೆ
ಭವಬಂಧವಳಿಯುವುದು ಮತ್ತೆ | ಮಾನವಾ
ತವಕದಿಂ ಮುಕ್ತಿಸತಿ ನಿನ್ನೊಳ್ । ಸ್ವಯಂವರವ
ಜವದಿಂದೆ ಬಯಸಿ ಮೇಲ್ವರಿವಳ್ ಮಾನವಾ ॥ಪಲ್ಲವಿ॥

ಹಿಂದೆ ಭವಕೋಟಿಯೊಳು ಮಾಡಿದಘಕುಲವೆಲ್ಲ
ಬೆಂದು ಹೋದುದು ಮನದೆ ನೆನೆಯಲ್ । ಮಾನವಾ
ಒಂದು ಬಾರುಚ್ಚರಿಸೆ ಮುಕ್ತಿಯಾಗುವುದೆರಡ
ರಿಂದೆ ಶಿವನೈದೆ ಋಣಿಯಹನು | ಮಾನವಾ
ಮಂದಿರವ ಬಿಡಬೇಡ ಪರ್ವತಾಗ್ರದೊಳಿರ್ಪ
ಕಂದರದೆ ನಿಲಬೇಡ ಬರಿದೆ । ಮಾನವಾ
ಕಂದಮೂಲವ ಸವಿಯಬೇಡ ನಿನ್ನಯೆ ತನುವ
ಕಂದಿಕುಂದಿಸಬೇಡ ತಪಿಸಿ । ಮಾನವಾ ೧

ಯೋಗದಸು ತಪದ ತನು ಸತ್ಕ್ರಿಯಂಗಳ ಶಿಖಿ ವಿ
ರಾಗದಾನನಮರಿವೆಯಕ್ಷಿ । ಮಾನವಾ
ಮೇಗೆ ಭಕ್ತಿಯ ಬೇರು ತತ್ತ್ವಗಳ ತೊಡವು ನಿಜ
ದಾಗು ಕಳೆಬಿಂದುಗಳ ಬಿತ್ತು । ಮಾನವಾ
ಆಗಮದ ಸಾರವಾಮ್ನಾಯಗಳ ತಿರುಳು ಮನು-
ಪೂಗದಣೆ ಮೋಕ್ಷದುಪಕಾರ್ಯಂ । ಮಾನವಾ
ಭೋಗಗಳ ಹೊಣೆ ಭಜಕರಮರತರು ಸಂಸಾರ
ರೋಗದೌಷಧವಿದುವೆಯಲ್ತೆ । ಮಾನವಾ ೨

ಸೂತ ಶೌನಕ ಸನಕ ಕಪಿಲ ಕಣ್ವ ದಧೀಚಿ
ಗೌತಮಾಗಸ್ತ್ಯಾದಿ ಋಷಿಗಳ್ । ಮಾನವಾ
ಓತಿದನೆ ತೊಟ್ಟುಟ್ಟು ನೋಡಿ ಪಾಡಗಿದಗಿದು
ಸಾತಿಶಯಮುಕ್ತಿವಡೆದಿರ್ಪರ್ । ಮಾನವಾ
ಭೂತಳದೊಳಿದರ ಬಲದಿಂ ವಿದಳ ಸೌಮಿನೀ
ಶ್ವೇತ ತಿರುನೀಲಕಂಠಾದ್ಯರ್ । ಮಾನವಾ
ಪ್ರೇತಪತಿಯೆರ್ದೆಯ ಬಿರ್ರನೆ ಬಿರಿಯುವಂತೊದೆದು
ವೈತರಣಿಯನು ದಾಂಟಿ ಪೋದರ್ । ಮಾನವಾ ೩

ಗಳಬಳಿಪ ಗದ್ಗದಂ ದಳವರಿವ ಮೋಹಲತೆ
ತುಳುಕಿ ತುಂತುರುಗೆದರ್ವ ಘರ್ಮಂ । ಮಾನವಾ
ಕಳೆಯೇರುತಿಹ ಕರಣವಿಳಿವಶ್ರುಜಳದ ಝರಿ
ಸುಳಿದಿರುಗಿ ಹೊಡೆಮುರಿವ ಪುಳಕಂ । ಮಾನವಾ
ಕೆಳೆಗೊಳಲ್ ರಸನೆ ಕೊಸರ್ದೆದ್ದು ದಾಂಗುಡಿನೆಗೆದು
ಕಿಳಿರ್ದುಬ್ಬಿ ಶಿವಶಿವಾ ಎಂದು । ಮಾನವಾ
ಹೊಳೆದು ಹೊಮ್ಮಿದ ಭರಕೆ ಮುಕ್ತಿಬೀಜದ ಮೇಲೆ
ಮೊಳಕೆಯೆರಡೆಲೆಯ ತಳ್ಪುವುದು । ಮಾನವಾ ೪

ಭವವನಧಿಬಡಬಮಘತರುಪರಶು ಗದಕುಮುದ-
ರವಿ ರುಗಹಿಬರ್ಹಿ ವಿಪದದ್ರಿ- ಮಾನವಾ
ಪವಿ ನಿಧನಮುಗಿರಮುತುದತದಬ್ಜಪದ್ಮ ಭಯ-
ದವದಾವಮಾಧಿಗಜಸಿಂಹಂ । ಮಾನವಾ
ಶಿವಯೆಂಬ ವರ್ಣಯುಗವಿದರಿನಹಿ ರಜ್ಜು ಹರಿ-
ಯುವಿ ವಿಷಂ ಸುಧೆಯಗ್ನಿ ಮಿಹಿಕಾ- ಮಾನವಾ
ಲವಮರಿ ಸಖಂ ಮೃತ್ಯು ದೂತನಸಿ ಕುಸುಮವೆನಿ-
ಸುವುದು ಗುರುಸಿದ್ಧನೊಲಿಯುವನು । ಮಾನವಾ ೫

## ದೇವದೇವೇಶ ನಿನ್ನಯೆ ಪಾದಪದ್ಮದೊಳು

ರಾಗ—ಧನ್ಯಾಸಿ

ದೇವದೇವೇಶ ನಿನ್ನಯೆ ಪಾದಪದ್ಮದೊಳು
ಶೀವಿರ್ಪ ನವವಿಧದ ಭಕ್ತಿಗಳ ವಹಿಸಿ ಬಿಡ
ದಾವಗಂ ಮನ್ಮನಂ ರಮಿಪುದನೆ ಕರುಣಿಸಿ
ನ್ನಾವ ಪದವಿಯನೊಲ್ಲೆನು ॥ಪಲ್ಲವಿ॥

ಸೊಕ್ಕುಜವ್ವನೆಯು ವಿಭ್ರಮ ಗಾಡಿ ಗಮಕಗಳ
ಮಿಕ್ಕು ವರ್ಣಿಸೆ ವಿರಹಿ ಬಲು ಹಿಗ್ಗಿ ಬಾಯ್ವಿಟ್ಟು
ಬೆಕ್ಕಸದಿ ಕೇಳ್ವಂತೆ ನಿನ್ನ ಲೀಲಾವಳಿಯ-
ನಾಲಿಪುದೆ ಸುಶ್ರವಣವು
ತಕ್ಕೆಯೊಡೆಯದ ಮಿಂಡಿಯುಪರತಿಯ ಸುಖವ ತನು
ಜಕ್ಕುಲಿಸಿ ಪೊಗಳ್ವ ವಿಟನಂತೆ ಬಾಷ್ಪದ ಕೋಡಿ
ಯುಕ್ಕಿ ಗದ್ಗದವೆರಸಿ ನಿನ್ನ ಮಹಿಮೆಗಳ ಕೊಂ-
ಡಾಡುವುದೆ ಕೀರ್ತನೆಯದು ೧

ಭೃಂಗಕ್ಕೆ ಸಿಲ್ಕಿರುವ ಕೀಟವದು ಮೊದಲ ತ-
ನ್ನಂಗಗುಣಗಳ ಮರೆದು ಹೊರಗರಿಯದದನಂತ-
ರಂಗದೊಳು ನೆನೆವಂತೆ ನಿನ್ನ ಮೂರ್ತಿಯನೆ ಜಾ
ನಿಸುತಿಹುದೆ ಸಂಸ್ಮರಣವು
ಅಂಗನಾತ್ಮಜ ಧನ ಗೃಹಕ್ಕೆಳಸಿ ಹಲವು ಕೃ
ತ್ಯಂಗಳನು ಬೇಸರದೆ ಮಾಳ್ಪ ಲೌಕಿಕನಂತೆ
ಹಿಂಗಿ ಹಸು ತೃಷೆ ನೋವು ನಿದ್ರೆಗಳ ನಿನ್ನನುಪ
ಚರಿಸುವುದೆ ಸೇವನೆಯದು ೨

ಕುಡುತೆಗಣ್ಣ ಬಲೆಯರು ಮೋಹಿಸಲೆನುತೆ ಕಾಮಿ
ನಿಡುನೇಹದಿಂ ನಿಜಾಂಗವನಲಂಕರಿಪಂತೆ
ಮೃಡನೆ ಕುಸುಮಾಭರಣಗಂಧಾದಿಯಿಂ ನಿನ್ನ
ಸಿಂಗರಿಸುವುದೆ ಪೂಜೆಯು
ಪೊಡವಿಪರ ಮುಂದೆ ಕಾಳೆಗವೆಸಗಿ ತೇಜವನು
ಪಡೆವೆನೆಂಬಭಿಮಾನದಿಂದೆ ಸಾಧಕನಲಸ
ದೊಡಲ ದಂಡಿಸುವಂತೆ ನಿನ್ನಡಿಗೆ ಮೆಯ್ಯನೀ-
ಡಾಡುವುದೆ ವಂದನೆಯದು ೩

ಹರಿಪೀಠದಲ್ಲಿ ಕುಳಿತೊಡ್ಡೋಲಗವನೆ ಕೊಡು
ವರಸಂಗೆ ನಮ್ರತೆಯಿನುಪಕರಣವೀವ ಪೊಸ
ಚರನಂತೆ ಕರಣತ್ರಯಂಗಳೊಳು ತವ ಚರಣ
ಕೈಂಕರ್ಯವದೆ ದಾಸ್ಯವು
ಸರಸಸಲ್ಲಾಪಸಮರತಿಗಳೊಳು ಮೆಚ್ಚಿಸಿದ
ಪುರುಷಂಗೆ ಸೋಲ್ತು ಕುರುಳ್ವೆರಳನಿತ್ತಂಗಂಗ-
ಳೆರಡಸುಗಳೊಂದಾಗಿ ಬಾಳ್ವಾಪ್ತೆಯಂತೆ ನಿನ-
ಗನುಕೂಲತೆಯೆ ಸಖ್ಯವು ೪

ಭುವಿಯೊಳತಿಪತಿಭಕ್ತಿವಿಡಿದಿಹ ಪತಿವ್ರತಾ-
ಯುವತಿ ತನ್ನನೆ ಪತಿಗೆ ಸೂರೆಗೊಟ್ಟಿರುವಂತೆ
ಶಿವನೆ ದೇಹಾರ್ಥ ಮಾನ ಪ್ರಾಣಗಳ ನಿನಗೆ
ಕೊಡುವುದಾತ್ಮಾರ್ಪಣವದು
ಶ್ರವಣ ಕೀರ್ತನ ಘನಸ್ಮರಣ ಸೇವನ ಪೂಜೆ
ತವ ನತಿಯು ದಾಸ್ಯ ಸಖ್ಯಾತ್ಮಾರ್ಪಣಗಳೆಂಬ
ನವಭಕ್ತಿಯಿಂ ನವಪ್ರಕೃತಿ ನವಗುಣವಳಿದು
ಗುರುಸಿದ್ಧನೊಲುಮೆಯಕ್ಕುಂ ೫

## ಏನೆನ್ನುತೆ ನಂಬಿ ಭಜಿಸಲಿ ನಿನ್ನ

ರಾಗ—ಪಂತುವರಾಳಿ

ಏನೆನ್ನುತೆ ನಂಬಿ ಭಜಿಸಲಿ ನಿನ್ನ
ನಾನಾತ್ವಗಳನಿಂತು ತಿಳಿದೆಲೆ ಶಿವನೇ ॥ಪಲ್ಲವಿ॥

ಪರಿಶುದ್ಧನೆಂಬೆನೆ ಪಸಿದೊವಲುಟ್ಟಿಹೆ
ಕರುಣಿಯೆಂಬೆನೆ ಕಾಮನನೆ ಕೊಂದಿಹೆ
ವಿರತನೆಂಬೆನೆ ವನಿತೆಯನೆಡೆವಿಡದಿಹೆ
ಸಿರಿವಂತನೆಂಬೆನೆ ತಿರಿಕೊಂಬೆ ಶಿವನೇ ೧

ಕುಲವಂತನೆಂಬೆನೆ ಶ್ವಪಚನೊಳುಂಡಿಹೆ
ಬಲು ಶಾಂತನೆಂಬೆನೆ ಅಸಿಯಾಂತಿಹೆ
ಕಲಿಯೆಂಬುವೆನೆ ಬಿಲ್ಲ ಪೆಟ್ಟನೆ ತಿಂದಿಹೆ
ಚಲುವನೆಂಬೆನೆ ರುಂಡದಳೆದಿಹೆ ಶಿವನೇ ೨

ನೆರೆಪೂಜ್ಯನೆಂಬೆನೆ ಕುಂಟಣಿಯಾಗಿಹೆ
ದೊರೆಯೆಂಬುವೆನೆ ಬಿಟ್ಟಿಯನೆ ಹೊತ್ತಿಹೆ
ಹಿರಿಯಕಿರಿಯುವೆಂಬುವೀ ಗುಣಿಮುರ್ಮಾವ
ಗುರುಸಿದ್ಧರೂಪ ನಾನರಿವೆನೆ ಶಿವನೇ ೩

## ನಿನ್ನನಾನೇನ ಬೇಡಲಿ ದೇವ ಕೊಡಲೆನಗೆ

ರಾಗ—ಕಲ್ಯಾಣಿ

ನಿನ್ನನಾನೇನ ಬೇಡಲಿ ದೇವ ಕೊಡಲೆನಗೆ
ನಿನ್ನೊಳೇನುಂಟಿವೆಲ್ಲವ ನಾನೆ ತಿಳಿದು ॥ಪಲ್ಲವಿ॥

ಅಶನವನು ಬೇಡುವೆನೆ ಕಾಲಕೂಟವು ಹೊ ದೇವ
ವಸನವನು ಬೇಡುವೆನೆ ಸೆಡೆದಾನೆದೊವಲು
ಪೊಸ ಭೂಷಣವ ಬೇಡುವೆನೆ ಭೀಕರಾಹಿಗಳು
ಮಿಸುಪ ಗಂಧವ ಬೇಡುವೆನೆ ಹೆಣದ ಬೂದಿ ೧

ತುರಗವನು ಬೇಡುವೆನೆ ಬಹುದಿನದ ಮುದಿಯೆತ್ತು
ಕರದ ಪಾತ್ರೆಯನು ಬೇಡುವೆನೆ ತಲೆಯೋಡು
ಅರಮನೆಯ ಬೇಡಿಕೊಂಬುವೆನೆ ಪಿತೃವನಭೂಮಿ
ಪರಿಚಾರಕರನು ಬೇಡುವೆನೆ ಭೂತಗಳು ೨

ನಿನ್ನ ಸಗುಣದ ಸಿರಿಯಿದಿಂತು ಭಿಕ್ಷಾವೃತ್ತಿ
ನಿನ್ನ ನಿರ್ಗುಣಸುಖವ ನೋಡೆ ಕೇವಲವು
ಇನ್ನಿದೊಂದನೆ ಬೇಡೆನೆನಗೆ ನಿನ್ನಯೆ ಭಕ್ತಿ-
ಯನ್ನೆ ಕರುಣಿಸಿ ಸಲಹು ಗುರುಸಿದ್ಧರೂಪಾ ೩

## ಭ್ರಮರಾಂಬ ಮಾಮೇವ ಪಾಹಿ । ಚಾರು

ರಾಗ—ಮಾರವಿ

ಭ್ರಮರಾಂಬ ಮಾಮೇವ ಪಾಹಿ । ಚಾರು
ಕುಮುದಾಕ್ಷಿ ಘನಮುಕ್ತಿ ಸುಖಮಿಹ ದೇಹಿ ॥ಪಲ್ಲವಿ॥

ಹರಿವರಲಲಿತತುರಂಗೇ । ನಿಜ
ಚರಣಸೇವಕಭವತಿಮಿರಪತಂಗೇ
ಕರತಲಕಲಿತಕುರಂಗೇ । ಸಾರ
ಸರಸಿಜಮುಖರಿಪುಪವನಭುಜಂಗೇ ೧

ಅರುಣದಾಡಿಮ ಸಮರದನೇ । ಪೂರ್ಣ-
ಕರುಣಾವಲೋಕನವಿರಚಿತಮದನೇ
ಸರಸಮಧುರವೀಟೀವದನೇ । ನವ್ಯ-
ಸುರುಚಿರಫಣಿವೇಣಿ ಗುಣಮಣಿಸದನೇ ೨

ಅಮರನಿಕರಪರಿಪಾಲೇ । ಘೋರ-
ಸಮರಸಮಯಜಿತಸುರರಿಪುಜಾಲೇ
ಹಿಮಗಿರಿವರಪುಣ್ಯಬಾಲೇ । ಬಾಲ-
ಹಿಮಕರಡಂಭವಿಡಂಬಿತಫಾಲೇ ೩

ಶಶಿಕಾಂತಮಂಜುಳಕರಣೇ । ದೇವ-
ಕುಸುಮನಿಚಯಕೃತನವನವಾಭರಣೇ
ಕಿಸಲಯನಿಭಮೃದುಚರಣೇ । ಭಕ್ತಿ-
ರಸವಾರಿನಿಧಿಮಗ್ನಜನಬದ್ಧಕರುಣೇ ೪

ಮಲ್ಲಿಕೋಜ್ವಲಮಂದಹಾಸೇ । ಸುರ-
ವಲ್ಲಭಸತಿರತಿವಿಹಿತವಿಲಾಸೇ
ಫುಲ್ಲಚಂಪಕಸುಮನಾಸೇ । ದೇವಿ
ಮಲ್ಲಿಕಾರ್ಜುನಪತ್ನಿ ಗುರುಸಿದ್ಧವಾಸೇ ೫

## ಏತಕಿನಿತೊಂದುಪೇಕ್ಷೆಯೆನ್ನ ಮೇಲೆ

ರಾಗ—ತೋಡಿ

ಏತಕಿನಿತೊಂದುಪೇಕ್ಷೆಯೆನ್ನ ಮೇಲೆ
ಮಾತೆ ಮನ್ನಿಸೆನ್ನನು ಜೀಮೂತಬಾಲೇ ॥ಪಲ್ಲವಿ॥

ಈಷಣತ್ರಯಂಗಳ ಸಂಗದಿ ನೊಂದು । ಮತ್ತೆ
ಕ್ಲೇಶಪಂಚಕಂಗಳುರಿಯಲ್ಲಿ ಬೆಂದು
ಪಾಶಮೂರರುಗಳ ಕಟ್ಟಿನೊಳಿಂದು । ಸಿಲ್ಕಿ
ಗಾಸಿಯಾಗುತಿರ್ಪೆನಲ್ಲ ಕೋಮಲಾಂಗಿ । ಬೇಗ
ಪೋಷಿಸೆನ್ನ ಮೌನಿಚಿತ್ತಪದ್ಮಭೃಂಗಿ । ಕೃಪಾ
ರಾಶಿಯೆಂದು ನಂಬಿದೆನು ಶಂಭುಸಂಗೀ ೧

ಆರು ವರ್ಗಂಗಳ ಮಾನಸದೆ ಕೂಡಿ । ಮತ್ತೆ
ಮೂರು ತಾಪಂಗಳೊಳು ಬಳಲಿ ಬಾಡಿ
ಕ್ರೂರಕರ್ಮಂಗಳನೆ ಮೋಹಿಸಿ ಮಾಡಿ । ಮುಂದೆ
ನಾರಕಕ್ಕೈದುವೆನಲ್ಲ ಕೀರವಾಣಿ । ನೀನೇ
ಕಾರುಣ್ಯದಿ ನೋಡಮ್ಮ ಪಲ್ಲವಪಾಣಿ । ಇನ್ನು
ಘೋರಿಸದಿರೆನ್ನನು ಪನ್ನಗವೇಣೀ ೨

ಸತ್ಯಶಾಂತಿ ಸನ್ಮಾರ್ಗಾದಿಗಳು ಕೆಟ್ಟು । ಮತ್ತೆ
ಮಿಥ್ಯೆಮಾಯಾಲೌಕಿಕಕ್ಕೆ ಚಿತ್ತವಿಟ್ಟು
ತಥ್ಯವಾದ ಬ್ರಹ್ಮಬೋಧೆಯನ್ನು ಬಿಟ್ಟು । ಹೀಗೆ
ವ್ಯರ್ಥನಾಗಿ ಹೋದೆನು ಚಂಪಕನಾಸೆ । ಹೀನ
ಕೃತ್ಯವಿಲ್ಲದಂತೆ ಮಾಡು ಕುಂದಹಾಸೆ । ನಿನ್ನ
ಭೃತ್ಯನೆನ್ನಿಸೆನ್ನ ಗುರುಸಿದ್ಧವಾಸೇ

# ಪಾಲಿಸಯ್ಯಾ ಪಾರ್ವತೀಶ್ವರಾ

ರಾಗ—ಪಂತುವರಾಳಿ

ಪಾಲಿಸಯ್ಯಾ ಪಾರ್ವತೀಶ್ವರಾ । ನೀನೆನ್ನನೊಲಿದು
ಪಾಲಿಸಯ್ಯಾ ಪಾರ್ವತೀಶ್ವರಾ ॥
ಪಾಲಿಸಯ್ಯಾ ಭಜಕಜನದ । ಯಾಳು ನನ್ನ ಭವಗುಣಗಳ
ಜಾಲವನ್ನು ತವಿಸಿ ನಿನ್ನ । ಬಾಲನೆಂದು ಕರುಣವಿಟ್ಟು ॥ಪಲ್ಲವಿ॥

ಮರೆದು ನಿನ್ನ ಧರೆಗೆ ಬಂದೆನೋ । ಸಂಸಾರವೆಂಬ
ಉರಿವ ಕಿಚ್ಚಿನೊಳಗೆ ಬೆಂದೆನೋ । ಅಜ್ಞಾನವೆಂಬ
ಹಿರಿಯಭೂತದಿಂದೆ ನೊಂದೆನೋ । ಪಂಚೇಂದ್ರಿಯಗಳ
ಉರುಳಿನೊಳಗೆ ಸಿಲುಕಿ ಮುಂದ । ನರಿಯದಧಮನಾಗಿ ನಿನ್ನ
ಚರಣಯುಗವ ಪೂಜಿಸುವುದ ಮರೆದು ನಾನು ಕೆಟ್ಟೆನಕಟಾ ೧

ಕಾಮಿನಿಯರ ರೂಪು ನೋಡುತೆ । ಮಾನಸದೊಳೆಳಸಿ
ಕಾಮಶರದ ಹತಿಗೆ ಬಾಡುತೆ । ವಾಯುಗಳನುಳಿದು
ಕಾಮಕೇಳಿಯೊಳಗೆ ಕೂಡುತೆ । ಅತ್ಯಾಸೆಯಿಂದೆ
ಹೇಮಭೂಮಿಗಳನು ಬಯಸಿ । ಪ್ರೇಮದಪ್ಪಿ ತೊಳಲಿ ಬಳಲಿ
ಸೋಮಧರನೆ ನಿನ್ನ ಮರೆದು । ತಾಮಸದೊಳು ಮುಳುಗಿಹೋದೆ ೨

ಪರರ ಗುಣವನೆಣಿಸಿ ಜರಿಯುತೆ । ಕಣ್ಣಲ್ಲಿ ಕಂಡ
ಸರುವ ವಿಷಯಗಳಿಗೆ ಹರಿಯುತೆ । ದುರುಮದದೆ ಸೊಕ್ಕಿ
ಗುರುವ ಹಿರಿಯರನ್ನು ಮರೆಯುತೆ । ಆಸಕ್ತಿಯಿಂದೆ
ತರುಣಿಸುತರು ನಿತ್ಯವೆಂದು । ಕರಡಿಯಂತೆ ತಬ್ಬಿಕೊಂಡು
ಬರಿದೆ ಕೆಡುವೆನಯ್ಯ ನಿಮಗೆ । ಮರುಕವಿನಿತು ಬಾರದಲ್ಲಾ ೩

ಕೆಡುವ ತನುವನಿದನು ನಚ್ಚುತೆ । ಈ ಕ್ಷಣಿಕವಾದ
ಪೊಡವಿಯಖಿಳಸುಖಕೆ ಮೆಚ್ಚುತೆ । ಲೌಕಿಕವನಿದನು
ತೊಡರಿ ಮೋಹದೊಳಗೆ ಮುಚ್ಚುತೆ । ನಿರ್ಭಾಗ್ಯನಡಿಯೊ
ಳೆಡಹಿ ನಿಧಿಯ ಕಾಣದಂತೆ । ಮೃಡನೆ ನಿತ್ಯಮುಕ್ತಿಸುಖವ
ಕೊಡುವ ನಿನ್ನ ಮರೆದು ನಾನು । ಕಡುದುರಾತ್ಮನಾದೆನಲ್ಲಾ ೪

ಆರು ಭ್ರಮೆಗಳೆನ್ನ ತಿನುತಿವೆ । ಆವರಿಸಿಕೊಂಡು
ಮೂರು ತಾಪವೆನ್ನ ಸುಡುತಿವೆ । ಷಡುವರ್ಗವೆನ್ನ
ಗಾರುಮಾಡಿ ಹಿಡಿದು ಕೊಲುತಿವೆ । ಕ್ಲೇಶಂಗಳೈದು
ವೈರಿಯಂತೆ ಹೊಸಗಿ ಮಸಗಿ । ಹೋರುತಿಹುವು ಭವದೆ ನೋಯ
ಲಾರೆ ಶ್ರೀಗುರುಸಿದ್ಧರೂಪ । ಸಾರಮೋಕ್ಷಸುಖವನಿತ್ತು ೫

## ರಕ್ಷಿಸದಿಹೆ ದೇವರೇ!

ರಾಗ—ಕಲ್ಯಾಣಿ

ರಕ್ಷಿಸದಿಹೆ ದೇವರೇ । ನೀನಿಂತಪ್ಪ
ಪಕ್ಷಪಾತವ ಮಾಳ್ಪರೇ
ಅಕ್ಷಯಪಾಪಿಷ್ಠರಹ ಪೂರ್ವದವರ ಪಾ-
ಪಕ್ಷಯವನು ಮಾಡಿ ಪೊರೆದೇತಕ್ಕೆನ್ನನು ॥ಪಲ್ಲವಿ॥

ಸ್ಮರಿಸಲುಚಿತವಲ್ಲದ । ಪಾಪವ ಮಾಡಿ
ಪರಕುವಿಹಕು ಸಲ್ಲದ
ನರಖೂಳನೆನಿಸಿದ ವಿರಳಗೊಲಿದು ಪ್ರಮ-
ಥರ ಸಾರ್ವಭೌಮತ್ವವಿತ್ತೇತಕೆನ್ನನು ೧

ತನಗಂತ್ಯಜೆಯೊಳೊಗೆದ । ಪುತ್ರಿಯ ಕೂಡಿ
ತನುವನಂತ್ಯದೆ ಕಳೆದ
ಘನಕರ್ಮಿ ಸುಕುಮಾರನನು ಪುಷ್ಪಕದೊಳಿಟ್ಟು
ಕನಕಪರ್ವತಕೆ ಕೊಂಡೊಯ್ದೇತಕ್ಕೆನ್ನನು ೨

ಕಾಮದಿಂ ದ್ವಿಜತೆಗೆಟ್ಟು । ಶೂದ್ರನ ಕೂಡಿ
ನೇಮನಿಷ್ಠೆಗಳ ಬಿಟ್ಟು
ಭೂಮಿಯೊಳಳಿದು ಚಾಂಡಾಲರೊಳುದಿಸಿದ
ಸೌಮಿನಿಗತಿಸೌಖ್ಯವಿತ್ತೇತಕ್ಕೆನ್ನನು ೩

ಪಾತಕಶತಕೋಟಿಯ । ನಾಚರಿಸಿದ
ಶ್ವೇತನೆಂಬುವ ಪಾಪಿಯ
ಯಾತನೆಬಡಿಪ ಕಾಲನ ಕೊಂದು ನಿಜರೂಪ-
ನಾತಂಗೆ ತೋರಿಸಿ ಪೊರೆದೇತಕ್ಕೆನ್ನನು ೪

ಇನಿತು ಪಾತಕಿಯೆ ನಾನು । ಆದರೂ ನಿನ್ನ
ನೆನೆಹದು ಕೆಡಿಸದೇನು
ಮನದೆ ' ಭಕ್ತಃ ಪ್ರಾಣೋ ಮಮ ' ಎಂಬ ವಚನವ
ನೆನೆಯದೆ ಗುರುಸಿದ್ಧರೂಪ ಏತಕ್ಕೆನ್ನನು ೫

# ಬರಿಯ ಭ್ರಮೆಯೊಳು ಬಿದ್ದು ಕೆಡಬೇಡವೆಲೆ ಮರುಳೆ

ರಾಗ—ದೇಶಿ

ಬರಿಯ ಭ್ರಮೆಯೊಳು ಬಿದ್ದು ಕೆಡಬೇಡವೆಲೆ ಮರುಳೆ
ಪರವಸ್ತುವನೆ ಮರೆದು ಲೌಕಿಕಿವ ನಂಬಿ ॥ಪಲ್ಲವಿ॥

ಶರಿರ ಸತಿಪುತ್ರರೆನ್ನವರೆಂದು ನಚ್ಚಿರುವೆ
ಮರಣಕಾಲದೆ ನಿನ್ನ ಹಿಂದೆ ಬಹರೇ
ಇರುವ ದ್ರವ್ಯವನೆಲ್ಲ ಕೊಟ್ಟು ಕಳುಹುವರೆ ಯಮ-
ಪುರದ ಬಾಧೆಯ ಬಂದು ಬಿಡಿಸಿಕೊಂಬುವರೇ ೧

ನೀನುದಿಪುದಕೆ ಮೊದಲು ನೀನದಾರಿವರಾರು
ನೀನಿರುವ ಪರಿಯಂತವಗಲದಿಹರೆ
ನೀನು ಪುನರಪಿ ಜನಿಸಲಿವರು ನಿನಗಾಗುವರೆ
ಶ್ವಾನನ ಕನಸಿನಂತೆ ಸಂಸಾರಸುಖವು ೨

ಕಾರಮಿಂಚಿನ ತೆರದೆ ತೋರಿ ನಿಮಿಷದೆ ತನುವು
ನೀರಗುರುಳೆಯ ತೆರದೆ ಮಾಯೆಯಹುದು
ಪಾರಮಾರ್ಥವ ಮರೆದು ಶರಿರಸುಖಕೆಳಸುವುದು
ನೀರಿನೊಳು ಕೈಯಿಕ್ಕಿ ನೆಕ್ಕಿದಂತಹುದು ೩

ನೆರೆದ ಸಂತೆಯ ಪರಿಯು ಸಿರಿ ಪುಣ್ಯ ತೀರಿದರೆ
ಹರಿದು ಹೋಹುದು ಸುತ್ತ ಬಯಲು ಬಯಲೆ
ಸ್ಥಿರಮೋಕ್ಷವನು ಪಡೆಯದಿಹಭೋಗಕಾಸಿಪುದು
ನೆರೆ ತುಪ್ಪದಾಸೆಗೆಂಜಲು ತಿಂದ ಪರಿಯು ೪

ಬಿಂದುಸುಖಕಗದಿನಿತು ದುಃಖವಸಿಗೊಸೆಯ ಮಧು-
ಬಿಂದುಲೇಹದೊಲೆನುತೆ ಗುರುಸಿದ್ಧನ
ಹೊಂದಿ ಲೌಕಿಕವನುಳಿದಧ್ಯಾತ್ಮದನುವನರಿ-
ದೊಂದೆಡರವೆರಸದಾನಂದದೊಳಗಿರದೆ ೫

## ನಂಬಬೇಡವೋ ಮನುಜ

ರಾಗ—ಒಡ್ಡಿ ಧನ್ಯಾಸಿ

ನಂಬಬೇಡವೋ ಮನುಜ । ನಂಬಬೇಡವೋ
ನಂಬಿ ಕೆಡುವರುಂಟೆ ಮಣ್ಣ । ಬೊಂಬೆಯಂತ ತನುವನಿದನು ॥ಪಲ್ಲ॥

ಮಾಯೆಯಿಂದೆ ಜನಿಸಿ ಬೆಳೆದು । ಕಾಯವೆನಿಸಿ ಸತ್ತು ಕಡೆಗೆ
ನಾಯಿನರಿಯು ತಿಂದು ಕೆಡುವ । ಹೇಯವಾದ ವಪುವನಿದನು ೧

ನೂರುಬಾಳ್ವೆನೆಂದು ತನ್ನ । ಸೇರಿನಲಿವರಾಶೆಯನ್ನು
ನೀರಕಲಸಿ ನಿಮಿಷದಲ್ಲಿ । ತೋರಿಯಳಿವ ದೇಹವಿದನು ೨

ಧರೆಯ ಭೋಗಕೆಳಸಿ ಪರವ । ಮರೆದು ತನ್ನ ನಚ್ಚಿದವರ-
ನೆರಡುವಿಧದಿ ಕೆಡಿಸಿ ಯಮನ । ಪುರಕೆ ಕಳುಹುವಂಗವಿದನು ೩

ಸತ್ತು ಹುಟ್ಟಿ ತಾನು ತನ್ನ । ನಿತ್ಯವೆಂದು ಹೊಂದಿದವರ
ಕತ್ತೆಯಂತಿರಿಹಪರಕ್ಕೆ । ಸುತ್ತಿಸುಳಿವ ಗಾತ್ರವಿದನು ೪

ಒಡೆಯದುಡಿಯದಮಲಸುಖವ । ಪಡೆಯೆ ಶ್ರೀಗುರುಸಿದ್ಧನಿಂದೆ
ಕೊಡದ ತೆರದೊಳೊಡೆದು ಧರೆಯೊ । ಳಡಗಿ ಕೆಡುವಜಡತನುವನು ೫

## ಮನವೆಂಬ ಮರ್ಕಟನ ತಡೆಯಲಾರೆನು ದೇವಾ

ರಾಗ—ಕೇದಾರಗೌಳ

ಮನವೆಂಬ ಮರ್ಕಟನ ತಡೆಯಲಾರೆನು ದೇವಾ
ಎನಿತಿದರ ಚಪಲಚೇಷ್ಟೆಗಳ ವರ್ಣಿಸಲಿ ॥ಪಲ್ಲವಿ॥

ಧರೆಯನೆಲ್ಲವನೊಂದೆ ಕೊಡೆಯಿಂದಲಾಳುವುದು
ಗಿರಿಯ ಗುಹೆಯೊಳು ಕುಳಿತು ತಪವ ಮಾಡುವುದು
ತರುಣಿಯರ ಕಂಕುಳೊಳು ಕೈಯಿಕ್ಕಿ ನಗಿಸುವುದು
ಕರಿಯ ಮೇಲಂಬಾರಿಯಲ್ಲಿ ಮೆರೆಯುವುದು ೧

ಅನುಭವದಿ ಜೀವೇಶರೈಕ್ಯವನು ತಿಳಿಯುವುದು
ಧನವ ದಶಲಕ್ಷವನು ಗಳಿಸಿ ಹೂಣುವುದು
ಮನೆಯ ಮಕ್ಕಳ ಬಿಟ್ಟು ವಿರತಿಯಿಂ ಪೊರಡುವುದು
ವನಜೋದ್ಭವಾಂಡವೊಂದೊಂದನೆಣಿಸುವುದು ೨

ಅರಿಗಳನು ಹಿಡಿದು ಹೆಡಮುಡಿಗಟ್ಟಿ ಹೊಸಗುವುದು
ಸುರಲೋಕಕೈದಿ ರಂಭೆಯೊಳು ರಮಿಸುವುದು
ಬರಿದೆ ನೀನೇಕಿನಿತು ಚೇಷ್ಟಿಸುವೆಯೆನೆ ಭುವಿಯೊ-
ಳಿರುವ ಕೋತಿಗಳಾರ ಶಿಷ್ಯರೆಂಬುವುದು ೩

ಪಿಡಿವೆನೆನೆ ಮೊದಲೆ ಮುಮ್ಮಾರ ಹಾರಾಚಿಹುದು
ಪೊಡೆವೆನೆನಲಾ ನುಡಿಯದಾರದೆಂಬುವುದು
ಕುಡುಗದನವಿನ ಕೊರಳ ಗುದ್ದೆಯಂದದೊಳೆನ್ನ-
ನೆಡೆವಿಡದೆ ಮೂಜಗದೊಳೆಳದಾಡುತಿಹುದು ೪

ಧರೆಯ ನಿಕ್ಷೇಪವನು ಕದ್ದೆಲ್ಲಿಗೋಡಿದರು
ಧರೆಯುದಲ್ಲಲ್ಲಿ ಕಳ್ಳನ ಕಾಡುವಂತೆ
ಗುರುಸಿದ್ಧ ಎನ್ನ ಮನವಾವ ವಿಷಯಂಗಳೊಳ-
ಗೆರಗಲಲ್ಲೆಲ್ಲ ನೀಂ ಕಾಣಿಸದ ಬಿಡಿಸೈ ೫

## ಆಗದಾಗದು ಲೋಕದವರಿಗೆ ನಿಜಮುಕ್ತಿ

ರಾಗ—ಮಾಳವಗೌಳ

ಆಗದಾಗದು ಲೊಕದವರಿಗೆ ನಿಜಮುಕ್ತಿ
ಭೋಗೇಚ್ಛೆಯೊಳಗುಳ್ಳ ಬರಿಯ ವೈರಾಗ್ಯದಿಂ ॥ಪಲ್ಲವಿ॥

ಪ್ರಸವದುಃಖದೆ ಕ್ರೀಡೆಯಃನು ಬಯ್ದು ಬಳಿಕದ-
ನೆಸಗಲಾತುರಿಪ ಕಾಮಿನಿಯಂದದಿ
ವ್ಯಸನಕಾಲದೆ ಸಂಸೃತಿಗೆ ರೋಸಿ ಸುಖವು ಸಂ-
ಧಿಸಲು ಮೈಮರೆವ ಪ್ರಸೂತಿವೈರಾಗ್ಯದಿಂ ೧

ನಳಕೃಷ್ಣಾದ್ಯರ ಹಾನಿಕಥೆಗೇಳ್ವ ಸಮಯದೊ-
ಳಿಳೆಯ ಭೋಗವನೆಲ್ಲ ಪುಸಿಗಾಣುತೆ
ಬಳಿಕೀಚೆಗೈತಂದು ಸತಿಪುತ್ರಧನಧಾನ್ಯ-
ಗಳಿಗಸವಸಿಪ ಪುರಾಣವೈರಾಗ್ಯದಿಂ ೨

ಶವವ ಸಂಸ್ಕರಿಸುವಲ್ಲಿಳಲ್ವರ ಕಂಡು ದೇ-
ಹವ ನಚ್ಚೆವಿನ್ನೆಂದು ದೃಢವ ಮಾಡಿ
ಭವನಕೈದಿದ ಕೂಡೆ ಗುರುಸಿದ್ಧ ಬಳಲ್ದ ಕಾ-
ಯವನುಪಚರಿಪ ಶ್ಮಶಾನವೈರಾಗ್ಯದಿಂ ೩



ಶ್ರೀ ಸರ್ಪಭೂಷಣ ಶಿವಯೋಗಿಗಳವರ ಗದ್ದುಗೆ
(ಶ್ರೀ ನಿ. ಪ್ರ. ಮಹಾದೇವಸ್ವಾಮಿಗಳವರಿಂದ ಜೀರ್ಣೋದ್ಧಾರ ಮಾಡಿಸಲ್ಪಟ್ಟಿದ್ದು)

## ಬೇಡಿಕೊಂಬುವೆನಭವ

ರಾಗ—ನಾಟಿ

ಬೇಡಿಕೊಂಬುವೆನಭವ ನಿನ್ನಂಘ್ರಿಯನು ತಳುವ
ಮಾಡದೀ ವರಗಳನೆ ಕರುಣಿಸೆಲೆ ದೇವಾ ॥ಪಲ್ಲವಿ॥

ಮನದೊಳಗೆ ನಿನ್ನ ಸಂಸ್ಮರಣೆಯನು ನಾಲಗೆಯ
ಕೊನೆಯಲ್ಲಿ ಪಂಚಾಕ್ಷರಿಯನೆ ನುಡಿವುದನು
ತನುವಿನೊಳು ನಿನ್ನ ಸೇವೆಯ ಮಾಳ್ಪುದನು ಕಿವಿಯೊ-
ಳನುದಿನವು ಪ್ರಣವನಾದವನೆ ಕೇಳ್ವುದನು ೧

ಪರಬಿಂದುಕಾಂತಿಗಳ ನೇತ್ರದೊಳು ನೋಳ್ಪುದನು
ಕರದೊಳಗೆ ನಿನ್ನ ಪೂಜೆಯನೆ ಮಾಳ್ಪುದನು
ಮರೆದಾದೊಡಿಹ ಪರಕೆಳಸದಿಹ ವಿರತಿಯನು
ಶರಿರವಿರುವನ್ನವರಿತವರ ಸಂಗವನು ೨

ಆವಕಾಲದೊಳು ತತ್ತ್ವಾನುಭವವನು ಕಾಣು-
ವೀವಿಶ್ವವೆಲ್ಲ ಪುಸಿಯೆಂಬ ಪ್ರಜ್ಞೆಯನು
ಭಾವದೊಳು ನೀನೆ ನಾನೆಂಬ ಸಂಧಾನವನು
ದೇವ ಗುರುಸಿದ್ಧನೊಳು ಕಡೆಗೆ ಮುಕ್ತಿಯನು ೩

## ಬಿಡು ಬಾಹ್ಯದೊಳು ಡಂಭವ

ರಾಗ—ಶಂಕರಾಭರಣ

ಬಿಡು ಬಾಹ್ಯದೊಳು ಡಂಭವ । ಮಾನಸದೊಳ-
ಗೆಡೆವಿಡದಿರು ಶಂಭುವ
ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ
ಪಡೆದರೆ ಶಿವ ನಿನಗೊಲಿವನೆ ಮರುಳೇ ॥ಪಲ್ಲವಿ॥

ಜನ ಮೆಚ್ಚೆ ನಡೆಕೊಂಡರೇನುಂಟು ಲೋಕದಿ
ಮನ ಮೆಚ್ಚೆ ನಡೆಕೊಂಬುವುದೆ ಚೆಂದವು
ಜನರೇನು ಬಲ್ಲರು ಒಳಗಾಗೊ ಕೃತ್ಯವ
ಮನವರಿಯದ ಕಳ್ಳತನವಿಲ್ಲವಲ್ಲಾ ೧

ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವರೆ
ಜನ ಮೆಚ್ಚದಿರೆ ಶಿವ ಬಿಡುತಿಹನೇ
ಜನರಿಲ್ಲಿ ನಿನ್ನನು ದೊಡ್ಡಾತನೆಂದರೆ
ಚಿನುಮಯ ಶಿವನಲ್ಲೆ ಅರಿಯನೆ ಮರುಳೇ ೨

ಮನದೊಳು ಶಿವ ತಾನು ಮನೆಮಾಡಿಕೊಂಡಿಹ
ಮನ ಮೆಚ್ಚೆ ನಡೆದರೆ ಶಿವ ಮೆಚ್ಚುವ
ಮನಕಂಜಿ ನಡೆಯದೆ ಜನಕಂಜಿ ನಡೆದರೆ
ಮನದಾಣ್ಮ ಗುರುಸಿದ್ಧ ಮರೆಯಾಗೊನಲ್ಲ ೩

## ಮಾತಿನಿಂದ ತಿಳಿಸಲೇಕೆ ?

ರಾಗ—ಪಾರಸಿ

ದ್ವೈತಭಾವವಳಿಯಿತೆಂದು । ಮಾತಿನಿಂದೆ ತಿಳಿಸಲೇಕೆ ?
ದ್ವೈತಭಾವವಳಿದ ಕುರುಹು ಮೇಲೆ ತೋರ್ಪುದು ॥ಪಲ್ಲವಿ॥

ಶರಿರದಾಸೆಯಿಲ್ಲದುದಕೆ । ಮರಣಕಂಜದಿಹುದೆ ಸಾಕ್ಷಿ
ವಿರತಿ ಬಲಿದುದಕ್ಕೆ ಭೋಗಕೆರಗದಿಹುದೆ ಸಾಕ್ಷಿಯು
ಕರಣವಿಜಯವಾದುದಕ್ಕೆ ಹರಿಯದಿಂದ್ರಿಯಗಳೆ ಸಾಕ್ಷಿ
ಮರೆವೆಯಡಗಿದುದಕೆ ತೋರ್ಪ ಬೊಮ್ಮದಿರವೆ ಸಾಕ್ಷಿಯು ೧

ಕ್ಷಮೆಯ ನಿಲವಿಗನ್ಯರಪಕೃತಿಗಳ ಸಹಿಸುತಿಹುದೆ ಸಾಕ್ಷಿ
ಸಮತೆಗೆಲ್ಲವೊಂದೆಯಾಗೆ ಕಾಣ್ಬ ನಡೆಯೆ ಸಾಕ್ಷಿಯು
ಮಮತೆಗೆಟ್ಟುದುದಕೆ ತನುಧನಗಳುಪೇಕ್ಷೆಯದುವೆ ಸಾಕ್ಷಿ
ಭ್ರಮೆಯ ನಷ್ಟಕಾತ್ಮನೇಕಭಾವನೆಯದೆ ಸಾಕ್ಷಿಯು

ವಿತ್ತಕಾಂಕ್ಷೆಯಳಿವಿಗನ್ಯರನನುಸರಣೆಯದುವೆ ಸಾಕ್ಷಿ
ಸತ್ಯಮುದಿಸಿದುದಕೆ ಪುಸಿಯುದಿರುವ ನುಡಿಯೆ ಸಾಕ್ಷಿಯು
ಚಿತ್ತಶುದ್ಧಿಯಾದುದಕ್ಕೆ ಸಕಲಸದ್ಗುಣಗಳೆ ಸಾಕ್ಷಿ
ವಸ್ತುವಿಡಿದುದಕ್ಕೆ ವಿವಿಧವಿಕೃತಿಲಯವೆ ಸಾಕ್ಷಿಯು ೩

ಸ್ತುತಿಗೆ ಮನದೆ ಹಿಗ್ಗದುದಕೆ ನಿಂದೆಗಳುಕದಿಹುದೆ ಸಾಕ್ಷಿ
ಶ್ರುತಿಯ ಮೀರಿದುದಕೆ ತೊರೆದ ಸರ್ವವಿಧಿಯೆ ಸಾಕ್ಷಿಯು
ಗತಿಯ ಬಯಸದುದಕೆ ಸಗುಣದೈವವಿಡಿಯದಿಹುದೆ ಸಾಕ್ಷಿ
ಮಿತಿಗೆ ಬಾರದುದಕೆ ಮೌನಮುದ್ರೆಯುದುವೆ ಸಾಕ್ಷಿಯು ೪

ಪರಮನಾದುದಕ್ಕೆ ಜೀವಗುಣಗಳುಡುಗಿದಿರವೆ ಸಾಕ್ಷಿ
ಹೊರಗೆ ಮರೆದುದಕ್ಕೆ ದೇಹಪರವಶವದೆ ಸಾಕ್ಷಿಯು
ಪರಮ ಶ್ರೀಗುರುಸಿದ್ಧನೊಡನೆ ಬೆರೆದು ಮೋಕ್ಷವಡೆದ ಗೊತ್ತಿ-
ಗರಿಗೆ ನಿಜವನರಿಯದಂತೆ ಸುಮ್ಮನಿಹುದೆ ಸಾಕ್ಷಿಯು ೫

## ಗುಣಗಳೆ ಭೂಷಣವಲ್ಲದೆ ಸರ್ವಕ್ಕು

ರಾಗ—ಸೌರಾಷ್ಟ್ರ

ಗುಣಗಳೆ ಭೂಷಣವಲ್ಲದೆ ಸರ್ವಕ್ಕು
ಮಣಿಹೇಮಾದಿಗಳು ಭೂಷಣವಲ್ಲವು
ಮಣಿಹೇಮಭೂಷವಾ ದೇಹಾಂತವಿರವಿಂತೀ
ಗುಣಭೂಷವಾ ಚಂದ್ರಾರ್ಕವದಾಗಿಯೆ ॥ಪಲ್ಲವಿ॥

ಚರಣಗಳಿಗೆ ತೀರ್ಥಯಾತ್ರೆಯೆ ಭೂಷಣ
ಕರಕೆ ಸತ್ಪಾತ್ರದಾನವೆ ಭೂಷಣ
ಗುರುಪಾದಪ್ರಣತಿಯೆ ಸಿರಸಿಗೆ ಭೂಷಣ
ಹರದರುಶನವೆ ನೇತ್ರಕೆ ಭೂಷಣ ೧

ಅನುಪಮ ಸತ್ಯವೆ ರಸನೆಗೆ ಭೂಷಣ
ಘನಪುಣ್ಯಕಥೆಯೆ ಕರ್ಣಕೆ ಭೂಷಣ
ತನುವಿಗೆ ಪರಕಾಂತಾಜಹನವೆ ಭೂಷಣ
ಮನಸಿಗೆ ಧರ್ಮಚಿಂತೆಯೆ ಭೂಷಣ ೨

ಪರಿಪೂರ್ಣ ವಿದ್ಯೆಗಗರ್ವವೆ ಭೂಷಣ
ಸಿರಿಗೆ ದೀನರ ಪೋಷಣೆಯೆ ಭೂಷಣ
ನರಜನ್ಮಕಹಿತಾಹಿತಾಸ್ಥೆಯೆ ಭೂಷಣ
ದುರಿತಭೀತಿಯೆ ಸೌಜನ್ಯಕೆ ಭೂಷಣ ೩

ಧರೆಯೊಳಹಿಂಸೆಯೆ ಕರುಣಕ್ಕೆ ಭೂಷಣ
ಪರತರತಪಕೆ ಶಾಂತಿಯೆ ಭೂಷಣ
ದರುಶನಾಶ್ರಮಕೆಲ್ಲ ವಿರತಿಯೆ ಭೂಷಣ
ವಿರತಿಗೆ ಬ್ರಹ್ಮವಿದ್ಯೆಯೆ ಭೂಷಣ ೪

ನೆರೆ ಪೂರ್ಣಲಕ್ಷವೇ ಯೋಗಕ್ಕೆ ಭೂಷಣ-
ವರಿವಿಗೆ ನಿರ್ವಿಕಲ್ಪವೆ ಭೂಷಣ
ಗುರುಸಿದ್ಧನಮಲಕೃಪಾಲಬ್ಧ ಮುಕ್ತಿಯೆ
ಪರಿಕಿಸಲಿಂತಿವೆಲ್ಲಕು ಭೂಷಣ ೫

## ಏತಕ್ಕೆ ಚಿಂತೆಯನು ಮಾಡುವೆ ಮೂಢಾ

ರಾಗ—ತೋಡಿ 

ಏತಕ್ಕೆ ಚಿಂತೆಯನು ಮಾಡುವೆ ಮೂಢಾ । ವಿಶ್ವ-
ನಾಥನೆ ಪೋಷಿಪನು ಯೋಚಿಸಬೇಡಾ ॥ಪಲ್ಲವಿ॥

ಯಾರು ನಮಗಾಗುವ ಸಹಾಯರಿಲ್ಲ । ವೆಂದು
ಹಾರೈಸಿ ಸುಮ್ಮನೆ ಬಳಲುವೆಯಲ್ಲ
ಮೂರು ಲೋಕಂಗಳನು ಪಾಲಿಸಬಲ್ಲ । ನಮ್ಮ
ಮಾರಾರಿ ನಿನ್ನೊರ್ವನ ಮರೆಯುವುದಿಲ್ಲ ೧

ಮಕ್ಕಳುಮರಿಗೆ ಮುಂದೆ ದಾರಿಯೇನು । ಎಂದು
ದುಕ್ಕವೊಳು ಕೊರಗಿ ಸಾಯುವೆ ನೀನು
ಮಕ್ಕಳು ಗರ್ಭದೊಳಿರುವಾಗ ತಾನು । ತುತ್ತ
ನಿಕ್ಕಿ ಸಾಕಿದೀಶನೀವಾಗಿಲ್ಲವೇನು ೨

ಬೆಟ್ಟದ ತುದಿಯೊಳಿರ್ಪ ಪ್ರಾಣಿಗಳಿಗೆ । ಅನ್ನ-
ವಿಟ್ಟು ಸಾಕುವೀಶನೆ ದಿಕ್ಕೆನ್ನುತೊಳಗೆ
ನಿಷ್ಠೆಯಿಂ ನಂಬಿರೆ ತಪ್ಪದರಗಳಿಗೆ । ತಾನೆ
ಕಟ್ಟಿ ತಂದುಕೊಡುವ ತನ್ನಯ ಬಳಿಗೆ ೩

ಆಸೆಯಿಂದಿರುವೆ ನಾಳೆಗುಂಬೆನೆಂದು । ಧಾನ್ಯ
ರಾಸಿಯನೇ ಮಾಡಿ ಹೋಗುವುದು ಸಂದು
ಏಸುಕಾಲವಿರಲಾನೆ ಮುಂದಕ್ಕೆಂದು । ಮೋವ-
ನಾಸಿಸದೆ ಬಾಳ್ವುದ ನೀ ತಿಳಿದಿಂದು

ಪಕ್ಷಿಗಳಿತ್ತತ್ತಲೈದಿ ಮೇಯುವಂತೆ । ಸರ್ವ
ವೃಕ್ಷಂಗಳೇನೈದಿ ಮೇಯುವುವೆ ಮುಂತೆ
ಪಕ್ಷಿವೃಕ್ಷಾದಿಗಳ ಪೋಷಿಸುವಂತೆ । ನಿನ್ನ
ರಕ್ಷಿಪನು ಗುರುಸಿದ್ಧನೆಲೊ ಭ್ರಾಂತೇ

# ಕಾಯಕಾಂತಾರವ ಹೊಕ್ಕು ಬೇಂಟೆಯನಾಡಿ

ರಾಗ—ಸೌರಾಷ್ಟ್ರ

ಕಾಯಕಾಂತಾರವಹೊಕ್ಕು ಬೇಂಟೆಯನಾಡಿ
ಮಾಯಾಮೋಹದ ಮೃಗಗಳ ಕೊಲ್ಲಿರೋ ॥ಪಲ್ಲವಿ॥

ಕೋಪವೆಂದೆಂಬುವ ಹಿರಿಯ ಹುಲಿಗಳುಂಟು
ಪಾಪವೆಂದೆಂಬ ಸೂಕರಗಳುಂಟು
ಚಾಪಲ್ಯಗುಣಗಳೆಂದೆಂಬ ಜಿಂಕೆಗಳುಂಟು
ಕಾಪಟ್ಯವೆಂದೆಂಬ ನರಿಗಳುಂಟು ೧

ಮೆರೆವಷ್ಟಮದಗಳೆಂದೆಂಬ ಕೋಣಗಳುಂಟು
ಬರಿಯ ಡಂಭಗಳೆಂಬ ಕರಡಿಯುಂಟು
ಉರಿವ ಮತ್ಸರ ಬುದ್ಧಿಯೆಂಬ ಕೇಸರಿಯುಂಟು
ಮರವೆಯೆಂದೆಂಬುವ ಗಜಗಳುಂಟು ೨

ಪರಮ ಸದ್ಭಕ್ತಿಯೆಂದೆಂಬ ಬಿಲ್ಲನೆ ಮಾಡಿ
ವಿರತಿಯೆಂದೆಂಬ ಸಿಂಜಿನಿಯ ಹೂಡಿ
ಅರಿವೆಂಬ ಬಾಣದೊಳವನೆಚ್ಚು ಕೆಡಹುತೆ
ಗುರುಸಿದ್ಧನಂಘ್ರಿಗಳ್ಗೆ ಪಹಾರಿಸಿ ೩

## ಎಂಥ ಸೋಜಿಗವಾಯಿತೆಲೆ ಕಾಂತೆ

ರಾಗ—ಫಾರಸಿ

ಎಂಥ ಸೋಜಿಗವಾಯಿತೆಲೆ ಕಾಂತೆ । ಇದ-
ರಂತಸ್ಥವನು ಪೇಳೆ ಮತಿವಂತೆ ॥ಪಲ್ಲವಿ॥

ಸೊಳ್ಳೆಯೊಂದಾನೆಯ ತಿಂದಿತು । ಕೋಳಿ-
ಪಿಳ್ಳೆಯು ಗರುಡನ ಕೊಂದಿತು
ಜಳ್ಳು ಬೀಜವು ಮೊಳೆತೆದ್ದಿತು । ದೊಡ್ಡ-
ಕೊಳ್ಳಿಯುರಿಯು ತಣ್ಣಗಿದ್ದಿತು ೧

ಏಣನೊಂದುಡುವನು ಹಡೆದಿತು । ಅದು
ಕೋಣೆಗಳೆಂಟನು ಬಡಿದಿತು
ಪ್ರಾಣವಿಲ್ಲದೆ ಶಿಶು ಹುಟ್ಟಿತು । ಹೆತ್ತ-
ಬಾಣತಿಯನೆ ನುಂಗಿ ಬಿಟ್ಟಿತು ೨

ಗೂಗೆ ಕಾಗೆಯ ತಿಂದು ತೇಗಿತು । ಕಂಡು
ಭೋಗಿ ಹೆಡೆಯನೆತ್ತಿ ಕೂಗಿತು
ಕೂಗಲು ಗಿಡುಗನು ಸತ್ತಿತು । ಸಾಯ-
ಲಾಗಳೆ ಗಿಳಿ ಕಾಣುತತ್ತಿತು ೩

ಕುರಿಯೊಂದು ನರಿಯನು ಹೊತ್ತಿತು । ಅದು
ಗಿರಿಗಳೇಳನು ಒಂದೆ ಹತ್ತಿತು
ಕರಡಿಯು ಕಪಿ ಮುರಿದಿಕ್ಕಿತು । ಸಣ್ಣ
ಇರುವೆಯು ಕೈಗದು ಸಿಕ್ಕಿತು ೪

ಇಲಿಯೊಂದು ಬೆಕ್ಕನು ಹಿಡಿದಿತು । ಚಿಕ್ಕ
ಮೊಲನಾರುನಾಯ್ಗಳ ಕಡಿದಿತು
ಹುಲಿಯು ಗೋವನ ಕಂಡು ನಡುಗಿತು । ಅದು
ಸಲೆ ಗುರುಸಿದ್ಧನೊಳಡಗಿತು ೫

## ಶರೀರವೆಂದೆಂಬುದ ಹೊಲನ ಹಸನ ಮಾಡಿ

ರಾಗ—ಸುರಟಿ

ಶರೀರವೆಂದೆಂಬುವ ಹೊಲನ ಹಸನ ಮಾಡಿ
ಪರತತ್ತ್ವ ಬೆಳೆಯನೆ ಬೆಳೆದುಣ್ಣಿರೋ ॥ಪಲ್ಲವಿ॥

ಶಮೆದಮೆಯೆಂದೆಂಬುವೆರಡೆತ್ತುಗಳ ಹೂಡಿ-
ವಿಮಲಮಾನಸವ ನೇಗಿಲನೆ ಮಾಡಿ-
ಮಮಕಾರವೆಂದೆಂಬ ಕರಿಕೆಯ ಕಳೆದಿಟ್ಟು
ಸಮತೆಯೆಂದೆಂಬ ಗೊಬ್ಬರವ ಚೆಲ್ಲಿ ೧

ಗುರುವರನುಪದೇಶವೆಂಬ ಬೀಜವ ಬಿತ್ತಿ
ಮೆರೆವ ಸಂಸ್ಕಾರವೃಷ್ಟಿಯ ಬಲದಿ
ಅರಿವೆಂಬ ಪೈರನೆ ಬೆಳೆಸುತೆ ಮುಸುಗಿರ್ದ
ದುರಿತದುರ್ಗುಣವೆಂಬ ಕಳೆಯ ಕಿತ್ತು ೨

ಸ್ಥಿರಮುಕ್ತಿಯೆಂದೆಂಬ ಧಾನ್ಯವ ಬೆಳೆದುಂಡು
ಪರಮಾನಂದದೊಳು ದಣ್ಣನೆ ದಣಿದು
ಗುರುಸಿದ್ಧನಡಿಗಳಿಗೆರಗುತ್ತೆ ಭವವೆಂಬ
ಬರವನು ತಮ್ಮ ಸೀಮೆಗೆ ಕಳುಹಿ ೩

## ಏಕೆ ಯಾತ್ರೆಯ ಮಾಡುತಿರ್ಪರಲ್ಲೇನಿಹುದು

ರಾಗ—ಮುಖಾರಿ

ಏಕೆ ಯಾತ್ರೆಯ ಮಾಡುತಿರ್ಪರಲ್ಲೇನಿಹುದು
ಸಾಕು ಬಿಡು ತಮ್ಮೊಳೀ ಗುಣಗಳಿರುತಿರಲು ॥ಪಲ್ಲವಿ॥

ಪರನಿಂದೆ ಪರವಧೂಸಂಗ ಕುಟಿಲ ಕುಯುಕ್ತಿ
ಪರಹಿಂದೆ ಕಪಟ ನಿರ್ದಯೆ ಕಠಿಣವಚನ
ಗುರುನಿರಾಕರಣೆ ಮದ ಮೋಹ ರಾಗ ದ್ವೇಷ
ದುರಿತಾದಿ ದುರ್ಗುಣಂಗಳು ತಮ್ಮೊಳಿರಲು ೧

ಸತ್ಯ ಸನ್ಮಾರ್ಗ ಶಮೆ ದಮೆ ಶಾಂತಿ ಗುರುಭಕ್ತಿ
ತತ್ತ್ವವಿತರಣೆ ವಿದ್ಯೆ ವಿನಯ ದಯೆ ಧರ್ಮ
ನಿತ್ಯಕರ್ಮ ವಿವೇಕ ವಿರತಿ ಜಪತಪಯೋಗ-
ವಿತ್ಯಾದಿ ಸದ್ಗುಣಂಗಳು ತಮ್ಮೊಳಿರಲು ೨

ತಿಳಿಯಲೀ ಗುಣಗಳೊಳಗೊಂದೊಂದೆ ಶತಯಾತ್ರೆ-
ಗಳ ಪುಣ್ಯಫಲವ ತವಿಸುವುವೀವುವೆನಲು
ಕಳೆದಿಡುತ್ತಾದಿ ಗುಣಗಳನಂತ್ಯಗುಣವಿಡಿದೊ-
ಡೊಲಿವನೀ ಗುರುಸಿದ್ಧನೆಂಬುದನು ಮರೆದು ೩

## ಅಧಿಕವಹ ಸಕಲ ಗುಣಗಳನಿಲ್ಲಿ ವರ್ಣಿಸುವೆ

ರಾಗ—ಮಾರವಿ

ಅಧಿಕವಹ ಸಕಲ ಗುಣಗಳನಿಲ್ಲಿ ವರ್ಣಿಸುವೆ-
ನಧಿಕರರಿದಾಚರಿಸಿ ನಿಜಮುಕ್ತರಹುದು ॥ಪಲ್ಲವಿ॥

ಸಕಲಪಾಪಂಗಳೊಳು ಪರನಿಂದೆಯದಧಿಕ
ಸಕಲಪುಣ್ಯದೊಳನ್ಯಪೋಷಣೆಯದಧಿಕ
ಸಕಲದುರ್ಗುಣಗಳೊಳು ಲೋಭವೆಂಬುವದಧಿಕ
ಸಕಲಗುಣಂಗಳೊಳು ವಿತರಣವದಧಿಕ ೧

ಅಖಿಳಲಾಘವಗಳೊಳು ದೇಹಿಯೆಂಬುವುದಧಿಕ
ಅಖಿಳಗೌರವದೊಳಗಯಾಚನೆಯದಧಿಕ
ಅಖಿಳವಹತಪಗಳೊಳು ಸತ್ಯವೆಂಬುವುದಧಿಕ
ಅಖಿಳತೀರ್ಥದೆ ವಿಮಲಮಾನಸವದಧಿಕ ೨

ಎಲ್ಲ ಬಂಧನಗಳೊಳು ಭವಬಂಧನವದಧಿಕ-
ವೆಲ್ಲ ವಿಜಯದೆ ಕರಣಗಳ ವಿಜಯವಧಿಕ
ಎಲ್ಲ ಜನ್ಮಂಗಳೊಳು ಮನುಜಜನ್ಮವದಧಿಕ-
ವೆಲ್ಲ ಸುಖಗಳೊಳು ವೈರಾಗ್ಯಸುಖವಧಿಕ ೩

ಸರ್ವಾಸನಂಗಳೊಳು ಸಿದ್ಧಾಸನವದಧಿಕ
ಸರ್ವಮುದ್ರೆಗಳೊಳು ಖೇಚರಿಯದಧಿಕ
ಸರ್ವನಾಡಿಗಳೊಳು ಸುಷುಮ್ನನಾಡಿಯದಧಿಕ
ಸರ್ವಲಕ್ಷ್ಯದಿ ಪೂರ್ಣಲಕ್ಷ್ಯವತ್ಯಧಿಕ ೪

ನಿಖಿಲವಹ ಗುರುಗಳೊಳು ಗುರುಸಿದ್ಧನತ್ಯಧಿಕ
ನಿಖಿಲವಿದ್ಯದೆ ಬ್ರಹ್ಮವಿದ್ಯೆಯತ್ಯಧಿಕ
ನಿಖಿಲಯೋಗದೆ ರಾಜಯೋಗವಹುದತ್ಯಧಿಕ
ನಿಖಿಲಪದಗಳೊಳು ಮುಕ್ತಿಪದವಿಯತ್ಯಧಿಕ ೫

## ಕಾಣರಲ್ಲಾ ಶಿವನ ಕಾಣರಲ್ಲಾ

ರಾಗ—ಕಾಂಬೋದಿ

ಕಾಣರಲ್ಲಾ ಶಿವನ ಕಾಣರಲ್ಲಾ
ಕ್ಷೋಣಿಯ ಸರ್ವಕ್ಷೇತ್ರವ ತಿರುಗಿ ಬೆಂದು ಬೆಂಡಾಗಿ ನರರು॥ಪಲ್ಲವಿ॥

ತನುವೆ ಪಂಪಾಕ್ಷೇತ್ರ ತನ್ನ
ಮನವೆ ದೇವಸ್ಥಾನವಲ್ಲಿ
ಮಿನುಪ ಜೀವನೆ ವಿರೂಪಾಕ್ಷೇಶ-
ನೆನಿಪ ಸಮ್ಯಜ್ಞಾನವ ಮರೆದು ೧

ಕಂಗಳ ಮಧ್ಯವೆ ಕಾಶೀಸ್ಥಳವು
ಶೃಂಗಾಟಕವೆ ಪಂಚಕ್ರೋಶ
ತುಂಗಪ್ರಣವವೆ ಶ್ರೀವಿಶ್ವೇಶ-
ಲಿಂಗವೆಂಬುವ ಮರ್ಮವ ಮರೆದು ೨

ಶಿರವೆ ಶ್ರೀಗಿರಿ ಗುರುಸಿದ್ಧೇಶ್ವರ-
ನಿರವು ಬ್ರಹ್ಮರಂಧ್ರವೆ ಗುಡಿಯು
ಮೆರೆವ ಜ್ಯೋತಿಪ್ರಭೆಯೆ ಮಲ್ಲೇ-
ಶ್ವರನೆಂದೆಂಬುವ ಭಾವವ ಮರೆದು ೩

## ಶ್ರೀಗಿರಿಯ ಸುಕ್ಷೇತ್ರ

ರಾಗ—ಯಾಲಪದ

ಶ್ರೀಗಿರಿಯ ಸುಕ್ಷೇತ್ರಕಿಂದು
ಹೋಗಿ ಯಾತ್ರೆಯ ಮಾಡಿ ಬಂದೆ
ಶ್ರೀಗಿರಿಯು ಶರಿರದೊಳಗುಂಟು । ಓ ಶ್ರೀಗುರುಸಿದ್ಧ
ಯೋಗಿ ಜನರಿಗೆ ಮರ್ಮವು ಬೇರುಂಟು ॥ಪಲ್ಲವಿ॥

ಆರು ಬೆಟ್ಟವ ದಾಂಟಿ ನಡೆದು
ಮೂರು ಕೊಳ್ಳದ ಮೂಲಕಿಳಿದು
ಏರಿದೆನು ಕೈಲಾಸದ್ವಾರವ । ಓ ಶ್ರೀಗುರುಸಿದ್ಧ
ಸಾರಿ ಬಡಗಲ ಗುಡಿಯ ಕಂಡೆನು ೧

ಏಳುಸುತ್ತಿನ ಕೋಟೆಯೊಳಗೆ
ನೀಳದುಪ್ಪರಿಗೆಗಳ ನಡುವೆ
ತಾಳ ಮದ್ದಳೆ ಭೇರಿ ಘಂಟೆಗಳು । ಓ ಶ್ರೀಗುರುಸಿದ್ಧ
ವೇಳೆವೇಳೆಗೆ ತಾವೆ ನುಡಿವುವು ೨

ಒಂಬತ್ತು ಬಾಗಿಲುಗಳದರೊ-
ಳಿಂಬಾದ ಬೀದಿಗಳು ನಾಲ್ಕು
ತುಂಬಿ ಸೂಸುವ ಕೊಳಗಳೇಳುಂಟು । ಓ ಶ್ರೀಗುರುಸಿದ್ಧ
ಸ್ತಂಭವೆರಡು ಶಿಖರವೊಂದುಂಟು ೩

ಪಾತಾಳಗಂಗೆಯೊಳು ಮಿಂದು
ಓತು ಶಿಖರೇಶ್ವರನಿಗೇರಿ
ಜ್ಯೋತಿರ್ಲಿಂಗಕೆ ದೃಷ್ಟಿಯನಿಟ್ಟೆನೊ । ಓ ಶ್ರೀಗುರುಸಿದ್ಧ
ಜ್ಯೋತಿರ್ಲಿಂಗವು ಕರದೆ ಕಾಣಿಸಿತು ೪

ಬರುವ ಕೋಣಗಳೆಂಟನು ಬಡಿದೆ
ಹಿರಿಯ ಹುಲಿಗಳನಾರ ತಡೆದೆ
ಮೊರೆವ ಸರ್ಪನ ಹೆಡೆಯ ಮೆಟ್ಟಿದೆನೊ । ಓ ಶ್ರೀಗುರುಸಿದ್ಧ
ಚರಿಪ ಕಪಿಯನು ಹಿಡಿದು ಕಟ್ಟಿದೆನೊ ೫

ಸಪ್ತನದಿಯ ಸಂಗಮ ದಾಂಟಿ
ಗುಪ್ತಕದಳಿಯ ಬನದೊಳು ಸುಳಿದ-
ಲ್ಲಿಪ್ಪ ಗುಹೆಯೊಳಗೊಬ್ಬನೆ ಹೊಕ್ಕೆನೊ । ಓ ಶ್ರೀಗುರುಸಿದ್ಧ
ಸಪ್ತವರ್ಣದ ಲಿಂಗವ ಕಂಡೆನೊ ೬

ಇಂದ್ರದಿಕ್ಕಿನೊಳಿದ್ದ ಸೂರ್ಯ
ಚಂದ್ರಗುಪ್ತದ ಪುರದೊಳು ಮುಳುಗೆ
ಚೆಂದಚೆಂದದ ಬೆಳಗು ತೋರ್ಪುದು । ಓ ಶ್ರೀಗುರುಸಿದ್ಧ
ನಿಂದು ನೋಡಲು ಬಯಲಿಗೆ ಬಯಲದು ೭

ಗಿರಿಯ ಶಿಖರಕಗ್ನಿಮುಖದೊ-
ಳಿರುವ ಅರ್ಕೇಶ್ವರನ ಹಿಂದೆ
ಸುರಿವುದಮೃತದ ಪಂಚಧಾರೆಯು । ಓ ಶ್ರೀಗುರುಸಿದ್ಧ
ಅರಿದು ಸೇವಿಸೆ ಮರಣವಿಲ್ಲವು ೮

ಇಂತು ಶ್ರೀಶೈಲ ಘನವ
ಭ್ರಾಂತಿಯಳಿದು ತಿರುಗಿ ನೋಡಿ
ಅಂತರಂಗದ ಗುಡಿಯ ಹೊಕ್ಕೆನೊ । ಓ ಶ್ರೀಗುರುಸಿದ್ಧ
ಶಾಂತಮಲ್ಲನೆ ನೀನೆಯಾಗಿರ್ದೆ ೯

## ಬೋಧಿಸೆನ್ನನು ಗುರುವೆ

ರಾಗ—ಕಲ್ಯಾಣಿ

ಬೋಧಿಸೆನ್ನನು ಗುರುವೆ । ನಿನ್ನಯ ದಿವ್ಯ-
ಪಾದವ ನಂಬಿರುವೆ
ವೇದಾಂತದೊಳು ಗೋಪ್ಯ | ವಾದ ತತ್ತ್ವವನೆ ಸಂ-
ಪಾದಿಸಿ ಮನದಿ ವಿ । ನೋದಿಸಿ ಸುಖಿಸೆಂದು ॥ಪಲ್ಲವಿ॥

ತಲೆವಾಗಿ ಬೆಳೆದಿರುವ । ಪಂಕೇಜದ
ದಳದೆ ತಿರುಗುತಿರುವ
ಕಳಹಂಸಶಿಶುವಿನ । ಸುಳುಹನು ತಡೆದು ತ-
ನ್ನಳಿನದ ಕರ್ಣಿಕೆ । ಯೊಳುನಿಂತು ನಲಿಯೆಂದು ೧

ಆದಿಯಂತ್ಯವ ಭೇದಿಸಿ । ನಿರ್ಗುಣವಾದ-
ನಾದಿಬ್ರಹ್ಮವ ಸಾಧಿಸಿ
ಹಾದಿ ನಾಲ್ಕರ ನಡು । ವೇದಿಕೆಯೊಳು ಕುಳಿತು
ಮೋದದಿ ದಶವಿಧ । ನಾದವ ಕೇಳೆಂದು ೨

ಮೂಲಕುಂಡಲಿಯನೆತ್ತಿ । ಆಗ್ನೇಯದ
ಮೇಲಣ ನೆಲೆಗೆ ಹತ್ತಿ
ಸಾಲಿಟ್ಟು ಸುರಿತರ್ಪ । ಹಾಲನೆ ಸವಿದುಂಡು
ನೀಲಜ್ಯೋತಿಯ ದಿವ್ಯ । ಜ್ವಾಲೆಯೊಳ್ ಬೆಳಗೆಂದು ೩

ರವಿಶಶಿಗಳ ತಡೆದು । ಸುಷುಮ್ನೆಯ
ನವಮಾರ್ಗದೊಳು ನಡೆದು
ಜವದಿ ಪಶ್ಚಮ ದಿಕ್ಕಿ । ನವನೀಧರದ ಮೇಲೆ
ತವೆ ಮೋಕ್ಷಸತಿಯನು । ಭವದಿ ಮೈಮರೆಯೆಂದು ೪

ಪರಿಪೂರ್ಣಾನಂದಭಾವ । ತಾರಕರೂಪ
ಗುರುಸಿದ್ಧ ದೇವದೇವ
ಅರಿದೆನೆಂಬಿರವನು । ಮರೆದುಯೆನ್ನೊಳು ನೀನು
ಕುರುಹೇನು ತೋರದೆ । ಬೆರೆದೇಕವಾಗೆಂದು ೫

## ತನುವೆಂಬ ಗರುಡಿಯೊಳನುಭವಧೀರರು

ರಾಗ—ಸೌರಾಷ್ಟ್ರ

ತನುವೆಂಬ ಗರುಡಿಯೊಳನುಭವಧೀರರು
ಘನಯೋಗಸಾಧನೆಯನು ಮಾಡಿರೊ
ಮನುಜರೊಲಿವ ನಿಮ್ಮ ಬಿನುಗು ಸಾಧನೆಯಿಂದೆ
ಜನನಮರಣವಂಜಿ ಓಡುವುವೇ

ಸ್ಥಿರಬುದ್ಧಿಯೆಂದೆಂಬ ಸಮನಾದ ನೆಲದೊಳು
ಗುರುಬೋಧೆಯೆಂಬ ದಂಡೆಗಳನೊತ್ತಿ
ಪರತತ್ವವಿವರದ ಬಸಿಗೆಗಳನೆ ಹಾಕು-
ತರಿವೆಂಬ ಕೊಣಕತವನೊತ್ತಿ ಕಟ್ಟಿ ೧

ನಾದಬಿಂದಗಳೆಂಬ ಸಂಗ್ರಾಣಗಳನೆತ್ತು-
ತಾದಿ ಚಿತ್‌ಕಳೆಯ ಲೋಡನೆ ತಿರುಹಿ
ವೋದದಿ ನಡುನಾಡಿಗಂಭದ ತುದಿಗೇರಿ
ಭೇದಿಸಿ ಬ್ರಹ್ಮಸಾಧನೆಗಲಿತು ೨

ಭರದಿಂದೆ ಯಮಭಟರುಗಳನು ಮುರಿದೊತ್ತಿ
ಪರಿಭವವೆಂದೆಂಬ ವೈರಿಯನೆ ಕೊಂದು
ಗುರುಸಿದ್ಧನೆಂಬ ಚಕ್ರೇಶನ ಮೆಚ್ಚಿಸಿ
ವರಮುಕ್ತಿಪದವಿಯ ಪಡೆಯಲೆಂದು ೩

## ಗುರುದೇವ ನೀ ಮಾಡಿದುಪಕೃತಿ

ರಾಗ—ನೀಲಾಂಬರಿ (ಚೌಪದಿ)

ಗುರುದೇವ ನೀ ಮಾಡಿದುಪಕೃತಿಯನು ನಾನು
ಮರೆಯುವುದೆಂದೆಂದಿಗಿಹದೊಳು

ಪೊಡವಿಯೊಳಖಿಳವೇದಾಗಮಶಾಸ್ತ್ರವ
ಬಿಡದೆ ಸಾಧಿಸಿದ ವಾದಿಗಳೆಲ್ಲ
ಹೊಡೆದಾಡಿ ಕಾಣದ ಪರತತ್ವವನು ನೀನು
ಹಿಡಿದೆನ್ನ ಕರಕೆ ಕೊಟ್ಟುದುದರಿಂದೆ ೧

ಕಂದಮೂಲಗಳ ಸೇವಿಸಿ ವಾಯುಗಳನೊತ್ತಿ
ಬಂಧಿಸಿ ಪಂಚಾಗ್ನಿಮಧ್ಯದೆ
ನಿಂದು ಯೋಗಿಗಳು ನೋಡುವ ಪರಬ್ರಹ್ಮವ
ತಂದೆನ್ನ ಕಣ್ಗೆ ತೋರಿದುದರಿಂದೆ ೨

ತರಳನೆನ್ನಯ ಮೇಲೆ ದಯೆಹುಟ್ಟಿ ಶಿವನೆ ಶ್ರೀ
ಗುರುಸಿದ್ಧನೆಂಬ ನಾಮವನಾಂತು
ಗುರುರೂಪದಿಂದೆನ್ನ ಬೋಧಿಸಿ ತನ್ನೊಳು
ಬೆರಸುತ್ತೆ ಮೋಕ್ಷವಿತ್ತುದರಿಂದೆ ೩

## ನೋಡೈ ತಾರಕತೇಜವ

ರಾಗ— ಪುನ್ನವರಾಳಿ

ನೋಡೈ ತಾರಕತೇಜವ । ನಿನ್ನಂತರದೊಳೆ
ನೋಡೈ ತಾರಕತೇಜವ ಪಲ್ಲವಿ

ದೇಹವಾನೆಂಬ ಮಾಯಾ । ಮೋಹವೆಲ್ಲವ ನೀಗಿ
ಸೋಹಂಭಾವದಿ ಚೇತೋ । ಗೇಹವನೊಳಹೊಕ್ಕು ೧

ದುಷ್ಟೇಂದ್ರಿಯಗಳನು । ಮೆಟ್ಟಿ ಸದ್ಭಾವದರಿವ
ತೊಟ್ಟು ತ್ರಿಕೂಟಗಿರಿಯ । ತುಟ್ಟನೆ ತುದಿಗೇರಿ ೨

ಓಡುವರ್ಕೇಂದುಗಳ । ಕೂಡಿಸಿ ಹಂಸನಿರ್ಜ
ಗೂಡನೆ ದಾಂಟಿ ಬ್ರಹ್ಮ । ನಾಡಿಯ ತುದಿಯಲ್ಲಿ ೩

ಪಿಂಡಾಂಡದೊಳಗಿರ್ಪ । ಖಂಡತೇಜವೆ ಕಣ್ಣ
ಕಂಡಿಯೊಳೈದಿ ಹಸ್ತ । ಪುಂಡರೀಕದೊಳಿಹುದು ೪

ಭಾವಾಭಾವವನೆಲ್ಲ । ತೀವಿದ ಗುರುಸಿದ್ಧ-
ದೇವನೊಳ್ ಕೂಡಿ ಪೂರ್ಣ । ಭಾವದೊಳ್ ಬಯಲಾಗಿ ೫



## ತೇರು ಸಾಗಿತಮ್ಮ ನೋಡಿರೆ

ರಾಗ—ಪಂತುವರಾಳಿ

ತೇರು ಸಾಗಿತಮ್ಮ ನೋಡಿರೆ । ಈ ದೇಹವೆಂಬ
ತೇರು ಸಾಗಿತಮ್ಮ ನೋಡಿರೆ
ತೇರು ಸಾಗಿತಮ್ಮ ನೋಡಿ । ಸಾರ ಮುಕುತಿಸತಿಯರೆಲ್ಲ
ಪಾರಮಾರ್ಥ ತತ್ವದೊಳಿವಿ | ಚಾರವೆಂಬ ಬೀದಿಯಲ್ಲಿ ಪಲ್ಲವಿ

ಕಾಲೆ ಎರಡು ಗಾಲಿಯಾಗಿವೆ । ಜಂಘೆಗಳವಕ್ಕೆ
ಕೀಲಿನಚ್ಚಿನಂತೆ ತೋರಿವೆ । ಈ ತೊಡೆಗಳೆರಡು
ಮೇಲುಮುಖದ ಕಂಭವಾಗಿವೆ । ಆಧಾರಮುಖ್ಯ-
ವೇಳುಚಕ್ರವೆಸೆವ ತನ್ನೊ । ಳೇಳು ನೆಲೆಗಳಾಗಲದರ
ಮೇಲೆ ತೋರ್ಪ ಮಸ್ತಕವೆ ವಿ। ಲೋಲರತ್ನಕಳಶವೆನಿಸಿ ೧

ಕರಗಳೆರಡು ಮದನತೋಳ್ಗಳು । ಮೇಲಿರುವ ಭುಜದ
ಶಿರಗಳೆರಡು ಹೊಳೆವ ಧ್ವಜಗಳು | ನೇತ್ರಂಗಳೆರಡು
ಮೆರೆವ ನೀಲದರ್ಪಣಂಗಳು । ಉಜ್ವಲಿಸುತಿರ್ಪ
ಶರಿರಕಾಂತಿಯದಕೆ ಸುತ್ತ । ಲಿರುವ ಪಟಗಳಾಗಿ ತೋರೆ
ನೆರೆ ಸುಷುಮ್ನನಾಡಿಯೆಂಬ । ಬಿರಿಯ ಬಲದ ಬಿಗುಹಿನಿಂದೆ ೨

ತನುಗುಣಂಗಳೆಲ್ಲ ಪ್ರಜೆಗಳು । ಮುಂಬರಿವ ಬುದ್ಧಿ
ಮನಗಳೆಂಬುವೆರಡು ಮಿಳಿಗಳು । ವೈಖರಿಯ ನುಡಿಗ |
ಳಿನಿತಿವೆಲ್ಲಾ ವಾದ್ಯರವಗಳು । ಸಂಭ್ರಮದಿ ಬಂದು
ಮಿನುಪ ಹೃದಯಕಮಲವೆಂಬ । ಕನಕಪೀಠದಗ್ರದಲ್ಲಿ
ಚಿನುಮಯಾತ್ಮ ಶ್ರೀಗುರುಸಿದ್ಧ । ನನುವಿನಿಂದೆ ಮೂರ್ತಿಗೊಳಲು ೩




ಶ್ರೀ ಫಾಲಲೋಚನಸ್ವಾಮಿಗಳವರ ಗದ್ದುಗೆ
ಸರ್ಪಭೂಷಣಮಠ, ಬೆಂಗಳೂರು

## ಯೋಗಮಾರ್ಗನಿಯೋಗದೊಳಿಹ ಶಿವ

ರಾಗ—ಆರಭಿ

ಯೋಗಮಾರ್ಗನಿಯೋಗದೊಳಿಹ ಶಿವ-
ಯೋಗಿಗೆ ನಮಿಸುವೆನು
ಭೋಗಗಳೊಳನುರಾಗವಿಲ್ಲದೆ । ಹೋಗಿ ನಿಜಭವರೋಗದವಧಿಯು
ನೀಗಿ ಚಿನ್ಮಯನಾಗಿ ಸಹಜದಿ । ತೂಗಿ ನಿಬ್ಬೆರಗಾಗಿ ಸುಖಿಸುವ
॥ಪಲ್ಲವಿ॥

ಸಾರಸಾರಿಯನೊತ್ತಿ ಬಂಧಿಸಿ । ಹಿಮ್ಮೆಟ್ಟಿ ನಿಂದ
ಸಾರಸಾಪ್ತನ ಕೂಡೆ ಹೊಂದಿಸಿ । ಮುಂದಕ್ಕೆ ನಡೆದು
ಮಾರುತಪ್ರಿಯನಲ್ಲಿ ಸಂಧಿಸಿ । ಸೌಷುಮ್ನರಂಧ್ರದಿ
ತೂರಿ ಧರೆಗಡಿಯೂರಿ ಸಲಿಲವ । ಹಾರಿ ದಹನನಿಗೇರಿ ಮರುತನ
ಮೀರಿ ಗಗನದಿ ತೋರಿ ಬ್ರಹ್ಮದಿ । ಸೇರಿಯಮೃತವ ಹೀರಿ ಸುಖಿಸುವ
೧

ಬಂಧಲಕ್ಷಗಳೆಂಬುವಿಲ್ಲದೆ । ಮುದ್ರಾಸನಾದಿಗ-
ಳೆಂದು ಬರಿ ಕಷ್ಟಕ್ಕೆ ಸಲ್ಲದೆ । ದ್ವಂದ್ವೋಪಕರಣದೊ
ಳೊಂದನಾದರು ಸೋಂಕಿ ನಿಲ್ಲದೆ । ಪೂರ್ಣಾನುಭಾವಕೆ
ಸಂದು ನಾದವು ಬಿಂದು ಕಳೆಗಳ । ನಿಂದು ನೋಡುವೆನೆಂದು
ಯೋಚಿಸ-
ದೆಂದು ತನಗೆರವೊಂದು ತೋರದಿ । ದೆಂದು ಸುಮ್ಮನೆ ನಿಂದು
ಸುಖಿಸುವ ೨

ನಾಡೆ ಗುರುಸಿದ್ಧೇಶನೊಲವಿಂದ । ತತ್ತ್ವೋಪದೇಶವ
ಮಾಡೆ ಹೊಳೆವಜರಂಧ್ರದೆಡೆಯಿಂದ । ಸದ್ ಭಾವಮನಗಳೊ-
ಳಾಡಿ ಹಸ್ತಕೆ ಬಂದು ನೆರೆನಿಂದ । ತದ್ ಬ್ರಹ್ಮ ತೇಜವ

ನೋಡಿ ಹರುಷವ ಸೂಡಿ ಪುಳಕವು । ಮೂಡಿ ಪೂಜೆಯ ಮಾಡಿ ನಲಿನಲಿ-
ದಾಡಿ ನಮಿಸುತೆ ಪಾಡಿ ಮುಕುತಿಯ । ಬೇಡಿ ಭಾವದೆ ಕೂಡಿ ಸುಖಿಸುವ ೩

## ಕರದೊಳಗೆ ಕಾಣಿಪುದು ಪರವಸ್ತು

ರಾಗ—ಕೇದಾರಗೌಳ

ಕರದೊಳಗೆ ಕಾಣಿಪುದು ಪರವಸ್ತುವಿದನರಿಯ-
ದರೆಮರುಳರೊಳಗರಸಿ ತೊಳಲಿ ಬಳಲುವರು ಪಲ್ಲವಿ

ಗೋವಿನೊಳಗಿಹ ಘೃತವು ಗೋವಿನಂಗದ ರುಜೆಯ
ಗೋವಿನಿಂ ಪೊರಮಟ್ಟು ಕೆಡಿಸುವಂತೆ
ಜೀವಭಾವದ ಕಳೆಯಲಾ ವಿಮಲಚಿದ್ಬಿಂದು
ವಾವರಿಸಿ ಪೊರಗಿಷ್ಟಲಿಂಗ ತಾನಾಗಿ ೧

ಕಾಷ್ಠದೊಡಲಿನ ಶಿಖಿಯು ಕಾಷ್ಠದಿಂದುಜ್ವಲಿಸಿ
ಕಾಷ್ಠವನೆ ಸುಟ್ಟು ತಾ ಬೆಳಗುವಂತೆ
ಶ್ರೇಷ್ಠ ಚಿತ್ಕಳೆಯೆ ಪೊರಮಟ್ಟು ಜಡಭಾವವನು
ನಿಟ್ಟೊರಸಲದು ಪ್ರಾಣಲಿಂಗ ತಾನಾಗಿ ೨

ಮನೆಯ ಸೊಡರಿನ ಬೆಳಗು ಮನೆಯ ಬಾಗಿಲೊಳ್ಪೈದಿ
ಮನೆಯಂಗಣದ ಮರ್ಬ ನೂಂಕುವಂತೆ
ತನುತಮವ ಕಳೆಯಲ್ಕೆ ಚಿನ್ನಾದಮುಜ್ವಳಿಸು-
ತನುಪಮಾದ್ವಯ ಭಾವಲಿಂಗ ತಾನಾಗಿ ೩

ಮುಂದೆ ಬಡಿಸಿರ್ದೆಡೆಯನುಳಿದು ಭಿಕ್ಷದ ಮನೆಗ-
ಳೊಂದು ನೂರಾರ್ಪೊಕ್ಕು ಬಳಲ್ವನಂತೆ
ಸಂದೇಹವೇಕೆ ಗೋಮುಖ ಗೋಳಕವು ಪೀಠ-
ವೆಂದು ಕಳೆ ನಾದ ಬಿಂದುವೆ ರೂಪ ಧರಿಸಿ ೪

ಲಿಂಗಪೀಠಮದಿಷ್ಟ ಗೋಮುಖವೆನಲು ಪ್ರಾಣ-
ಲಿಂಗ ಗೋಳಕವದುವೆ ಭಾವಲಿಂಗ

ಲಿಂಗವಿ:ವ ಮೂರ ಕರ ಮನ ಭಾವದೊಳಗಿರಿಸಿ
ತುಂಗ ಗುರುಸಿದ್ಧ ವಿವರಿಸಿ ಕೊಟ್ಟ ನಿಜವ

## ಲಿಂಗಪೂಜೆಯ ಮಾಡಿರೊ

### ರಾಗ—ಕಲ್ಯಾಣಿ

ಲಿಂಗಪೂಜೆಯ ಮಾಡಿರೋ । ನಿಮ್ಮೊಳಿ ಪ್ರಾಣ
ಲಿಂಗಪೂಜೆಯ ಮಾಡಿರೋ
ಗಂಗೆಯುಮುನೆಗಳ । ಸಂಗಮದೊಳು ಮಿಂದು
ಶೃಂಗಾಟದುಪರಿಯ । ರಂಗಮಂಟಪದೊಳು ಪಲ್ಲವಿ

ವರಭಕ್ತಿಜಲವ ನೀಡಿ । ಮಜ್ಜನಗೆಯ್ದು
ವಿರತಿಗಂಧವನೆ ತೀಡಿ
ಕರಣೇಂದ್ರಿಯಗಳೆಂಬ । ಮಿರುಗುವಕ್ಷತೆಯನಿ-
ಟ್ಟರಿವೆಂಬ ನಿರ್ಮಲ । ಸರಸಪುಷ್ಪವ ಸೂಡಿ ೧

ಹರುಷವೆಂಬುವ ಧೂಪವ । ಸಮರ್ಪಿಸಿ
ಪರಬಿಂದು ರುಚಿದೀಪವ-
ನಿರದೆತ್ತಿ ಪರಿಪೂರ್ಣ । ನೈವೇದ್ಯವನು ಮಾಡಿ
ಮೆರೆವ ತ್ರಿಗುಣವೆಂಬ । ವರ ತಾಂಬೂಲವ ಕೊಟ್ಟು ೨

ಕರದಿಷ್ಟಲಿಂಗವಿದೆ । ಶರಿರದಲ್ಲಿ
ಪರವಸ್ತು ತಾನಾಗಿದೆ
ಹೊರಗೊಳಗೆಲಡೆನ್ನ । ದರಿವರಿವನೆ ಮೀರಿ
ಗುರುಸಿದ್ಧನಂಘ್ರಿಯೊಳ್ । ಬೆರೆದೇಕಮಯನಾಗಿ ೩

## ಬೆರೆಯ ಬಾರದೆ

ರಾಗ—ಸುವ್ವಾಲೆ

ಬೆರೆಯ ಬಾರದೆ । ತಿಳಿದು । ಬೆರೆಯ ಬಾರದೆ
ಮರೆದು ಬಾಹ್ಯವನ್ನು ತನ್ನ । ಕರದಖಂಡತೇಜದೊಡನೆ ಪಲ್ಲವಿ

ತಿಳಿವೆನಿಸುವ ಸುರಭಿಗೂಡಿ । ನಳನಳಿಸುವ ವಿಕಚಹೃದಯ
ನಳಿನದಮಳಕರ್ಣಿಕೆಯೊಳು । ಬೆಳಗುವಿಷ್ಟಲಿಂಗದೊಡನೆ ೧

ಪರಿವ ಗಂಗೆಯಮುನೆಯೆರಡು । ಬೆರೆದ ಸಂಗಮಸ್ಥಳದೊಳ-
ಗಿರುವ ಗಗನಗಿರಿಯ ತುದಿಯೊ । ಳುರಿವ ಪ್ರಾಣಲಿಂಗದೊಡನೆ ೨

ಮಹಿತ ಶ್ರೀಗುರುಸಿದ್ಧನೊಲಿದು । ವಿಹರಿಸುವ ಸುಷುಮ್ನನಾಡಿ-
ಕುಹರದಗ್ರದಚಲಸರಸಿ । ರುಹದ ಭಾವಲಿಂಗದೊಡನೆ ೩

## ದಿವ್ಯಯೋಗಿ

**ರಾಗ—ಮಧುಮಾಧವಿ**

ಭಾವಲಿಂಗದ ನಿಜವನು ಪೂರ್ಣಮಯವಾಗಿ
ಭಾವಿಸಿ ಪೂಜೆಗೆಯ್ವನೆ ದಿವ್ಯಯೋಗಿ ಪಲ್ಲವಿ

ಧರೆಯೆ ಪೀಠಿಕೆಯಷ್ಟ ದಿಶೆಯೆ ಗೋಮುಖಮೂರ್ಧ್ವ-
ಪರಿಪೂರ್ಣವಾಗಿರ್ಪ ಬಯಲೆ ಗೋಳಕವು
ಸರುವ ಲೋಕಗಳನಿಂತೊಳಕೊಂಡ ಲಿಂಗವ
ನರಿವೆಂಬ ಕರವಾರಿರುಹದೊಳಗಿರಿಸಿ ೧

ಶರಧಿಸಪ್ತಕದಿಂದಲಭಿಷೇಕವೆರೆದಿಂದು-
ತರಣಿತಾರಕೆಗಳ ಕುಸುಮವ ಧರಿಸಿ
ಸ್ಫುರಿಸುವೌಷಧಿಗಳೆಲ್ಲವ ನೈವೇದ್ಯವ ಮಾಡಿ
ಮೆರೆವಜಾಂಡದ ವಸ್ತ್ರವಿದನು ಬಾಸಣಿಸಿ ೨

ಅದರ ಗರ್ಭದೊಳೆ ತಾನಿರುತಿರ್ದು ತನ್ನಯ
ಹೃದಯಮಧ್ಯದೊಳದನು ಹುದುಗಿಸಿ ಬಳಿಕ
ಅದು ತಾನರ್ಚನೆಯೆಂಬ ತ್ರಿಪುಟಿಯಳಿದು ಮಿಕ್ಕ
ಸದಮಳ ಗುರುಸಿದ್ಧನಿರವೆ ತಾನಾಗಿ ೩

## ಮಂಗಳ ಜಯಜಯ

ರಾಗ—ಶ್ರೀ

ಮಂಗಳ ಜಯಜಯ । ಮಂಗಳ ಜಯಜಯ
ಮಂಗಳ ಗುರುಸಿದ್ಧಯತಿರಾಜಗೆ

ಮರವೆಯಿಂದೆಡನಾಗಿ । ಚರಿಸುವ ಹಂಸನ
ತಿರುಗಿಸಲೆರಡೊಂದಾದೋಂಕಾರದ
ಶರಧಿ ನಿರ್ಝರ ಭೇರಿ । ಮುರುಜೆ ಘಂಟೆಗಳ ಸು-
ಸ್ವರದೊಳೋಲಾಡುವ ಪರಿಪೂರ್ಣಕೆ ೧

ಈಡೆ ಪಿಂಗಳೆಗಳ । ಜೋಡುಗೂಡಿಸಿ ನಡು-
ನಾಡಿಯ ನಿಡುಮಾರ್ಗದೊಳು ನಡೆದು
ಮೂಡುವ ರವಿಶಶಿ । ಗೂಡಿ ಮುಂದಿರುವಗ್ನಿ-
ಗೂಡಿನೊಳಾಡುತಿಪಾರೂಢಗೆ ೨

ಮೂಲಕುಂಡಲಿಯನು । ಮೇಲುಮುಖವ ಮಾಡಿ
ಸಾಲಾದ ಕೋಣೆಕೋಣೆಯ ಹೊಗಿಸಿ
ತಾಲುಚಕ್ರದ ಮೇಲ । ಣಾಲಯದತಿ ಸೂಕ್ಷ್ಮ
ನೀಲದ್ವಾರದೊಳೆಡೆಯಾಡುವಗೆ ೩

ಮೂರು ನಾಲ್ಕೊಂದನು । ಮೀರಿ ಮುಂದಣ ಸಣ್ಣ
ದಾರಿಯ ಹಿಡಿದುಹಿಂದಕೆ ನಡೆದು
ತೋರುವ ಪರಿಪೂರ್ಣ । ತಾರಕ ಬ್ರಹ್ಮದೆ
ಸೇರಿ ನಿರ್ಮಯಲಾದ ಚಿದ್ರೂಪಗೆ ೪

ಗುರುದತ್ತ ಪರವೊಂದೆ | ದ್ವಿತ್ರಿಷಟ್ ತ್ರಿಂಶ-
ದುರು ಷೋಡಸತ್ತರ ದ್ವಿಶತವಾಗೆ
ಕರಮನೋಭಾವದೊ । ಳುರಿ ಕರ್ಪುರಗಳಂತೆ
ಬೆರೆದಿಹ ಗುರುಸಿದ್ಧ ಯತಿರಾಜಗೆ ೫

## ಪರಿಪಕ್ವಹೃದಯರು

ರಾಗ—ರೇಗುಪ್ತಿ

ಪರಿಪಕ್ವಹೃದಯರಲ್ಲದ ಮಂದಮನುಜರ
ಬರಿದೆ ಬೋಧಿಪೆನೆಂಬ ಭ್ರಮೆಯೇಕೆ ಮನುಜಾ
ಅರರೆ ಇಂತಘಟನಾಘಟನನೆ ನಿನ್ನೊಳಗಿರೆ
ಮರಣಾದ್ಯನರ್ಥವಿನ್ನಿಳಿಯುವರ್ಗಹುದುಂಟೇ ಪಲ್ಲವಿ

ಪರುಷವೇದಿಯು ಸೋಂಕೆ ಕಬೊರ್ನ್ನು ಕನಕವಾ-
ಗುರಿವಂತೆ ಕರ್ಗಲ್ಲು ಕನಕವಾಗುವುದೇ
ದುರಿತವರತ ಮುಮುಕ್ಷುಗಳಿಗಲ್ಲದೆ ಕರ್ಮ-
ಪರರಿಗನುಗ್ರಹಿಸಲು ಮುಕ್ತರಹುದುಂಟೇ ೧

ಮೊಳೆಜವ್ವನದ ಮೋಹಿನಿಯು ಸುರತಿಸೆ ಗರ್ಭ
ಬೆಳೆವಂತೆ ಹಸುಳೆಗೆ ಗರ್ಭ ನಿಲ್ಲುವುದೇ
ತಿಳಿವಾಸಕ್ತರಿಗಲ್ಲದಹವೆಂಬ ನರಕದ
ಹುಳುಗಳಿಗುಪದೇಶಿಸಲು ಬುದ್ಧರಹುದುಂಟೇ ೨

ಬಲಿದ ಶುಕ್ತಿಯೊಳು ಸ್ವಾತಿಯ ಬಿಂದು ಮುತ್ತಾಗು-
ವೊಲು ಕೆರೆಜಲದ ಚಿಪ್ಪಿನೊಳಾಗುತಿಹುದೇ
ಸಲುವಾತ್ಮಜಾಗರೂಕರಿಗಲ್ಲದಜ್ಞಾನ-
ಮಲಜೀವರ್ಗರುಹೆ ಶ್ರೀ ಗುರುಸಿದ್ಧನಹುದುಂಟೇ ೩

## ಜ್ಞಾನನೇತ್ರದ ಘನವನೇನೆಂಬೆನಹಹಾ

ರಾಗ—ಎರಕಲಕಾಂಬೋಧಿ

ಜ್ಞಾನನೇತ್ರದ ಘನವನೇನೆಂಬೆನಹಹಾ
ಮೌನಿಗಳ ಹೃದಯಾಬ್ಜವೆಂಬ ಮುಖದೊಳು ಮೂಡಿ
ತಾನೊಂದೆಯಾಗೆಲ್ಲ ಜಗವನೀಕ್ಷಿಸುವ ಪಲ್ಲವಿ

ಮುಸುಗುವೆವೆಯೊತ್ತುವಣು ತಡೆವ ತೆರೆ ಕವಿವ ತಮ-
ವೊಸರ್ವ ಜಲವಾವರಿಪ ಪರೆಯುಗಿವ ನೊರಜು
ಸಸಿಪ ರುಜೆಯಿರದೆ ತನು ತಮಗೆ ಬೇರೆ
ನಿಸದಿನ ಶಶಿಶಿಖಿಯ ಬೆಳಗನುಳಿದೊಳ ಹೊರಗುನೋಳ್ಪ ೧

ಕಾರಣದಿ ಜನಿಸದಂತ್ಯಕೆ ಲಯಿಸದಾಮಿಷವಿ-
ಕಾರಗೊಳದೊಂದೆ ವಿಷಯವನರಿವುತಿರದೆ
ದೂರದರುಶನಗೆಡದೆ ಪರರ್ಗೆ ತೋರದವಸ್ಥೆ
ಮೂರರೊಳು ಭಿನ್ನಿಸದೆ ತನ್ನ ತಾ ಕಾಣ್ಬ ೨

ತನುಜೀವ ಗುಣ ವರ್ಣದೈವತಾಕ್ಷರಕಾಲ
ವೆನಿಪ ತ್ರಿಪುಟಿಗಳ ಮಹದಾದಿ ದೃಶ್ಯಗಳ
ತನಗನ್ಯ ಚೈತನ್ಯವಿಲ್ಲದರಿವಪರೋಕ್ಷ
ವೆನಿಪ ಗುರುಸಿದ್ಧನಿರವೆ ತಾನಾದ ೩

## ಮುನ್ನ ನಾನೇನು ಪುಣ್ಯಗಳ ಮಾಡಿರ್ದೆನೊ

ರಾಗ—ಮಧುಮಾಧವಿ

ಮುನ್ನ ನಾನೇನು ಪುಣ್ಯಗಳ ಮಾಡಿರ್ದೆನೊ
ನನ್ನ ನಿಜವ ನಾನೆ ತಿಳಕೊಂಡೆನಲ್ಲಾ ಪಲ್ಲವಿ

ಶರಿರವೆ ನಾನೆಂದು ದೃಢದಿಂದೆ ನೆರೆನಂಬಿ
ಪರವಸ್ತುವನು ಮುನ್ನ ಮರೆದಿರ್ದ ತೆರದಿ
ಶರಿರವ ಮರೆದೀಗ ಕರಣತ್ರಯದೆ ನಾನೆ
ಪರವೆಂಬ ನಂಬುಗೆ ಕರಿಗೊಂಡಿತಲ್ಲಾ

ನಾನಾಗೋವುಗಳ ಹಾಲೊಂದೆ ರೂಪಾದಂತೆ
ನಾನಾವ್ಯಕ್ತಿಗಳಲ್ಲಿ ಪರಿಪೂರ್ಣನಾಗಿ
ನಾನಿರ್ಪೆ ಹಾನಿವೃದ್ಧಿಯು ದೇಹಕಹುದೆನ್ನೊ
ಳೇನಿಲ್ಲವೆಂಬೂಹೆ ತಲೆದೋರಿತಲ್ಲಾ

ಬಯಲೊಳು ಮನೆಗಳುದಿಸಿ ಬಿದ್ದು ಹೋಗಲಾ
ಬಯಲೇನು ಕೆಡದಂತೆ ಕಮಲಜಾಂಡಗಳು
ಲಯಿಸುದಿಸುದಿಸಿ ಲಯಿಸುವೆನ್ನೊಳು ನಾನು
ಲಯಿಸೆನೆಂಬುವ ಬುದ್ಧಿ ಕುದಿಸಾಗಿತಲ್ಲಾ ೩

ಕುರಿಯ ಹೊತ್ತದನು ಮರೆದು ಸುತ್ತಲರಸುವ
ಕುರುಬನಂದದೊಳದ್ರಿ ಗುಹೆ ಗುಲ್ಮಗಳೊಳು
ಅರಿಹುಚ್ಚರರಸಿ ಕಾಣದ ವಸ್ತು ಸರ್ವತ್ರ
ವಿರುವುದೆಂಬರಿವೆನ್ನೊಳಡಿಯಿಟ್ಟಿತಲ್ಲಾ ೪

ಕುರುಡರಾನೆಯ ಮುಟ್ಟಿ ಮನಕೆ ಬಂದಂದದಿಂ
ದರಿವಂತೆ ಷಣ್ಮತಸ್ಥರು ಬೇರೆ ಬೇರೆ
ಒರೆವ ಕಲ್ಪನೆಯ ಮೀರಿರ್ದ ವಸ್ತುವು ತಾನೆ
ಗುರುಸಿದ್ಧನೆಂಬಾಸ್ಥೆಯಳವಟ್ಟಿತಲ್ಲಾ ೫



## ದೂರವಿಲ್ಲವೋ ಮುಕ್ತಿ

ರಾಗ—ಸುವ್ವಾಲೆ

ದೂರವಿಲ್ಲವೋ ಮುಕ್ತಿ । ದೂರವಿಲ್ಲವೋ
ಪಾರಮಾರ್ಥ ತತ್ತ್ವಸುಖವ | ಸೂರೆಗೊಂಬ ಯತಿಗದೇನು ಪಲ್ಲವಿ

ಜನಿಸಿ ತೋರ್ಪ ಜಗವಿದೆಲ್ಲ । ಕನಸಿನಂತೆ ಕೆಡುವುದೆಂದು
ಮನದೊಳರಿದು ಜನಿಸಿ ಕೆಡದ । ಚಿನುಮಯಾಂಶವಿಡಿದ ಯತಿಗೆ ೧

ತೋರವಖಿಳವಿಷಯಗಳ ವಿ । ಕಾರದಾಹ್ವಯಾಕೃತಿಗಳ
ಮೀರುತಸ್ತಿ ಭಾತಿ ಹಿತವಿ । ಚಾರವರಿದು ಸುಖಿಪ ಯತಿಗೆ ೨

ಮೆರೆವ ದೃಕ್ಕೆ ಬ್ರಹ್ಮ ವಿಶ್ವ । ದಿರವೆ ದೃಶ್ಯವೆಂಬುದರಿವ
ಮರೆದು ಶ್ರೀಗುರುಸಿದ್ಧನಲ್ಲಿ । ಬೆರೆದು ಪೂರ್ಣನಾದ ಯತಿಗೆ ೩

## ಅನುಭಾವದಡಿಗೆ

ರಾಗ—ಎರಕಲಕಾಂಬೋಧಿ

ಅನುಭಾವದಡಿಗೆಯ ಮಾಡಿ ಅದ
ಕ್ಕನುಭಾವಿಗಳು ಬಂದು ನೀವೆಲ್ಲ ಕೂಡಿ ಪಲ್ಲವಿ

ತನುವೆಂಬ ಭಾಂಡವ ತೊಳೆದು । ಕೆಟ್ಟ
ಮನದ ಜಂಜಡವೆಂಬ ಮುಸುರಿಯ ಕಳೆದು
ಘನವೆಂಬ ಮನೆಯನೆ ಬಳಿದು । ಅಲ್ಲಿ
ಬಿನುಗು ತ್ರಿಗುಣವೆಂಬುವೊಲೆಗುಂಡ ತುಳಿದು ೧

ವಿರತಿಯೆಂಬುವ ಮಡಿಯುಟ್ಟು । ಪೂರ್ಣ
ಹರಭಕ್ತಿಯೆಂಬ ನೀರನೆ ಎಸರಿಟ್ಟು
ಅರಿವೆಂಬ ಬೆಂಕಿಯ ಕೊಟ್ಟು । ಮಾಯಾ
ಮರವೆಯೆಂಬುವ ಕಾಷ್ಟಗಳನೆಲ್ಲ ಸುಟ್ಟು ೨

ಪರವೆಂಬ ಸಾಮಗ್ರಿಗೂಡಿ । ಸಾರ
ತರ ಮೋಕ್ಷವೆಂದೆಂಬ ಪಾಕವ ಮಾಡಿ
ಹರಶರಣರು ಸವಿದಾಡಿ । ನಮ್ಮ
ಗುರುಸಿದ್ಧ ದೇವನ ಚರಣವ ಪಾಡಿ ೩

## ಬಾಯ ಬ್ರಹ್ಮವನುಡಿದನುಭವವಿಲ್ಲದ

ರಾಗ—ಶಂಕರಾಭರಣ

ಬಾಯ ಬ್ರಹ್ಮವನುಡಿದನುಭವವಿಲ್ಲದ
ಮಾಯಾಮೋಹಿಗೆ ಮೋಕ್ಷವೆಂದೆಂದಿಗಹುದೆ ಪಲ್ಲವಿ

ತಿರುಕರಂಗಡಿ ಬೀದಿಯೊಳಗೆ ಕೂಡುತೆ ರಾಜ
ರರಮನೆಯೊಳ ಸುದ್ದಿಗಳನಾಡುವಂತೆ
ಅರಿಯದೆ ಪರವಸ್ತುವಿನ ಗೊತ್ತುಗುರಿಯನು
ಹಿರಿಯರಾಡುವ ಮಾತ ಕಿವಿಯೊಳು ಕೇಳಿ ೧

ಕೊರಳುದ್ದ ನೆಲದೆ ಹೂಳಿಸಿಕೊಂಡು ಗಗನದಡ
ಪರಿಯಂತ ಹಾರುವೆನೆನುತಿಹನಂತೆ
ಮರೆದಾತ್ಮನನುವ ಸಂಸ್ಕೃತಿಬಂಧದೊಳು ಸಿಲುಕಿ
ಪೊರಗೆ ಜನರ ಮೆಚ್ಚಿಸುವ ಹೆಮ್ಮೆಯಿಂದೆ ೨

ಕುರುಡರೆಲ್ಲರು ಗೊಂಬೆಯಾಡುವಲ್ಲಿಗೆ ಬಂದು
ನೆರೆದವರೊಳು ತಾವು ನಗುತಿರುವಂತೆ
ಗುರುಸಿದ್ಧನಿರವು ಮಾನಸಕೆ ಗೋಚರವಿಲ್ಲ
ದಿರುತೆ ಸುಮ್ಮನೆ ಹೊತ್ತುಗಳೆಯುವ ನೆವದೆ

## ಏನಿರ್ದೊಡೇನು ನಿಜಬೋಧೆಯೊಂದಿಲ್ಲದಿರೆ

ರಾಗ—ಕಲ್ಯಾಣಿ

ಏನಿರ್ದೊಡೇನು ನಿಜಬೋಧೆಯೊಂದಿಲ್ಲದಿರೆ
ಕಾನನದ ಬೆಳದಿಂಗಳಂತೆ ನಿಷ್ಫಲವು ಪಲ್ಲವಿ

ಕಾಯದೊಳು ಮನ್ಮಥನ ಪಳಿವ ಸುಂದರರೂಪು
ಬಾಯೊಳೆಲ್ಲರ ಮರುಳುಗೊಳಿಪ ಜಾಣ್ನುಡಿಯು
ಆಯವಾಗಿರ್ದು ತನ್ನಿರವ ತಾನರಿಯದಿರೆ
ನಾಯ ಮೊಲೆಯೊಳಗಿರ್ದ ಹಾಲಿನಂತಹುದು ೧

ಚಂಡಪ್ರತಾಪದಿಂದರಿಗಳನು ಜಯಿಸಿ ಭೂ-
ಮಂಡಲವನೆಲ್ಲವೊರ್ವನೆಯಾಳುತಿರ್ದು
ಪಿಂಡದೊಳಗಿರ್ಪ ಜೀವಾತ್ಮರನುವರಿಯದಿರೆ
ರಂಡೆಗೊದಗಿರ್ದ ಯೌವನದಂದಹುದು ೨

ಅಣಿಮಾದಿ ಸಕಲಸಿದ್ಧಿಗಳೊಡನೆ ತನ್ನ ಮನ
ದಣಿವಂತೆ ನಾಕಲೋಕದೊಳು ಪರಿಣಮಿಸಿ
ಅಣಿಯರದೆ ಗುರುಸಿದ್ಧನೊಡನೈಕ್ಯವಡೆಯದಿರೆ
ಹೆಣಕೆ ಮಾಡಿರ್ದ ಶೃಂಗಾರದಂತಹುದು ೩

## ಪರಮನ ನೆಲೆ ಸಿಕ್ಕದು । ಲೌಕಿಕರಿಗೆ

ರಾಗ—ಶಂಕರಾಭರಣ

ಪರಮನ ನೆಲೆ ಸಿಕ್ಕದು । ಲೌಕಿಕರಿಗೆ
ಸ್ಥಿರಮುಕ್ತಿಸುಖ ದಕ್ಕದು
ಹರಿದಾಡುತಿರ್ದ ಮುನ್ನಿನ ಜೀವ । ಗುಣಗಳ
ತೊರೆದು ನಿತ್ಯಾನಂದವಡೆಯದೆ ಬರಿದೆ ಪಲ್ಲವಿ

ಪಂಚಕ್ಲೇಶಗಳಿಗೆ ಮನವನೀಯದೆ । ಕೆಟ್ಟ
ಪಂಚೇಂದ್ರಿಯೋದ್ರೇಕವನು ತವಿಸಿ
ಪಂಚಕೋಶಗಳ ಬೇರಿಟ್ಟು । ಬ್ರಹ್ಮದ
ಪಂಚಲಕ್ಷಣಗಳನರಿಯದೆ ಬರಿದೆ ೧

ಆರು ವರ್ಗಗಳೆಂಬುವಡವಿಗೆ । ಕಾಲಿಕ್ಕ
ದಾರು ಭ್ರಮೆಯ ಬಲೆಯನು ಹರಿದು
ಆರೂರ್ಮಿಗಳ ಹಾನಿವೃದ್ಧಿಗೆ । ಸಾಕ್ಷಿಯಾ
ಗಾರಧ್ವದುಪರಿಯೊಳಳಿಯದೆ ಬರಿದೆ ೨

ಚರಿಪ ಪಕ್ಷಿಗಳಿಗೆ ತೆರಪೀವಾ । ಗಸದೊಲೀ
ಪರಿ ಗುಣಗಳಿಗನ್ಯನಾಗುಳಿದು
ಗುರುಸಿದ್ಧ ನಾನೆಂಬುದಳಿದೆಲೆ । ಯುದಿರಿದ
ಮರದಂತೆ ನಿಃಶಬ್ದವಾಗದೆ ಬರಿದೆ ೩

## ಸ್ಥಿರಮುಕ್ತಿವಡೆಯದ ನರಜನ್ಮವೇಕೆ

### ರಾಗ—ಒಡ್ಡಿ ಧನ್ಯಾಸಿ

ಸ್ಥಿರಮುಕ್ತಿವಡೆಯದ ನರಜನ್ಮವೇಕೆ
ಪರಮನ ನೆಲೆಗಾಣದತಿಜಾಣ್ಮೆಯೇಕೆ ಪಲ್ಲವಿ

ಸಲೆ ಸತ್ಯವಿಲ್ಲದ ಸುಜನತ್ವವೇಕೆ
ಮೊಳೆವ ಕಾಮನ ಕೊಲ್ಲದೆತಿತನವೇಕೆ
ಅಳಿಯಾಸೆಗೆಡದಿಹ ಸನ್ಯಾಸವೇಕೆ
ಒಳಗೆ ಸಂಶಯಗೊಂಬುವದ್ವೈತವೇಕೆ ೧

ಹರಿವ ವಾಯುವ ನಿಲ್ಲಿಸದ ಯೋಗವೇಕೆ
ಪರಮಾರ್ಥವಿಡಿಯದ ಬಹುಶಾಸ್ತ್ರವೇಕೆ
ಕರುಣೆಶಾಂತಿಗಳಿಲ್ಲದಿಹ ತಪವೇಕೆ
ಹೊರಗೊಳಗೊಂದಾಗದನುಭವವೇಕೆ ೨

ತನುವ ಬೇಗಿಡದನುಸಂಧಾನವೇಕೆ
ತನಗೆ ನಿಶ್ಚಯವಿಲ್ಲದುಪದೇಶವೇಕೆ
ಮನದ ಬಯಕೆಯುಡುಗದ ಮೌನವೇಕೆ
ಘನವನಾಲಿಂಗಿಸದುಪರತಿಯೇಕೆ ೩

ನೀನಾನೆಂಬುವುದಳಿಯದ ಭಕ್ತಿಯೇಕೆ
ನಾನಾತ್ವವನು ಭೇದಿಸದ ತತ್ತ್ವವೇಕೆ
ತಾನಾರುಯೆಂದರಿಯದ ಯುಕ್ತಿಯೇಕೆ
ಜ್ಞಾನವಿಲ್ಲದ ದೀರ್ಘವೈರಾಗ್ಯವೇಕೆ ೪

ಪರಿಭವವನು ಕೆಡಿಸದ ಗುರುವೇಕೆ
ಪೆರತಾಗಿ ಪೂಜೆಗೊಂಬುವ ದೈವವೇಕೆ
ಪರಿಪೂರ್ಣಭಾವವಿಲ್ಲದ ಲಕ್ಷ್ಯವೇಕೆ
ಗುರುಸಿದ್ಧನಾಗಿ ನಿಲ್ಲದ ಸೌಖ್ಯವೇಕೆ ೫

## ಪರತತ್ತ್ವ ಸಾಧ್ಯವಾಗುವುದೇ । ಜೀವ

ರಾಗ—ಯರಕಲಕಾಂಬೋದಿ

ಪರತತ್ತ್ವ ಸಾಧ್ಯವಾಗುವುದೇ । ಜೀವ
ಪರಮರನೊಡಗೂಡದವರಿಗೆ ಬರಿದೆ ಪಲ್ಲವಿ

ಕಾಮುಕಾಲರಗೆಲ್ಲದವಗೆ । ಕೆಟ್ಟ
ಹೇಮ ಕಾಮಿನಿ ಭೂಮಿಗಳ ಬಿಡದವಗೆ
ನಾಮರೂಪಕೆ ಮೋಹಿಸುವಗೆ । ಮಿಕ್ಕ
ಪ್ರೆಮಾಸ್ತಿ ಭಾತಿಯನೊಡಗೂಡದವಗೆ

ದೇಹವಾಸನೆ ಕೆಡದವಗೆ । ತನ್ನ
ನಾಹಮೆಂಬುವ ಮರವೆಯ ನೀಗದವಗೆ
ಕೋಹಂ ಭ್ರಮೆಗೆ ಸಿಲುಕದವಗೆ । ತಾನೆ
ಸೋಹಮೆಂದರಿದು ಸಹಜನಾಗದವಗೆ ೨

ಬರಿದೆ ಕರ್ಮಗಳ ಮಾಳ್ಪವಗೆ । ಇಹ
ಪರಗಳ ಭೋಗಾನುಭವಕೆಳಸುವಗೆ
ಹೊರಗೊಳಗೊಂದಾಗದವಗೆ । ತನ-
ಗೆರವೇನು ತೋರದೆಂಬರಿವಿಲ್ಲದವಗೆ ೩

ನಾನೆಂಬಹಮುಳ್ಳವನಿಗೆ । ನೀನು
ನಾನೆಂಬ ಭೇದಭಾವನೆ ಪೋಗದವಗೆ
ಮಾನ ಮಾತ್ಸರ್ಯವ ಮೀರದವಗೆ । ತನು
ಹಾನಿವೃದ್ಧಿಗೆ ಸಾಕ್ಷಿ ತಾನೆನ್ನದವಗೆ ೪

ಮರಹಿನ ಮೊದಲರಿಯದಗೆ । ತಾನೆ
ಪರವೆಂಬ ಪ್ರಜ್ಞೆಯುದಿಸಿಯರೆಯದವಗೆ
ಗುರುಸಿದ್ಧನೊಲು ತೋರದವಗೆ । ತೆರೆ
ಯರತಬ್ಧಿಯಂತೆ ನಿಶ್ಚಲವಾಗದವಗೆ ೫

## ಅನುಭವಮಾರ್ಗದೆ ಸುಖಿಸುವ ಯೋಗೀ-

ರಾಗ—ಶಂಕರಾಭರಣ

ಅನುಭವಮಾರ್ಗದೆ ಸುಖಿಸುವ ಯೋಗೀ-
ಶನ ಪುಣ್ಯಕೆಣೆಯೊಂದುಂಟೇ
ಘನವೆ ತಾನಾದಗೆ ನಿಃಶ್ರೇಯಸ-
ವನು ಬೇರೆಣಿಪ ಬಯಕೆಯುಂಟೇ ಪಲ್ಲವಿ

ಪರಿಕಲ್ಪನೆಯಾದಿಯನರಿದಗೆ ಕುಲ
ದರುಶನದಭಿಮಾನತೆಯುಂಟೇ
ಪರಿಪೂರ್ಣತೆಯಳವಟ್ಟಗೆ ತೀರ್ಥಾ-
ಚರಣೆ ವ್ರತಂಗಳು ಹಿತವುಂಟೇ
ಶರಜಭವಾಂಡಶತವ ಬಳಸಿದಗಿಹ
ಪರಗಳಪಲಕಾಂಕ್ಷತೆಯುಂಟೆ
ಹೊರಗೊಳಗೊಂದಾದವನಿಗೆ ಲಕ್ಷಿಸಿ
ಬೆರೆವೆನೆಂಬ ಭಿನ್ನತೆಯುಂಟೇ ೧

ಮನಸಿನೊಳಾತ್ಮನನರಿದಗೆ ಗಿರಿಗುಹೆ
ವನದೊಳು ತಪಿಸುವ ಭ್ರಮೆಯುಂಟೆ
ತನುವನು ಘಟದೊಲು ಪರವೆಂದರಿದಗೆ
ಜನನ ಮರಣದುಪಹತಿಯುಂಟೇ
ಮನಸಿಗೆ ತಾ ಸಾಕ್ಷಿಕನೆಂದರಿದಗೆ
ಮನದ ವಿಕಾರದ ತೊಡಕುಂಟೆ
ತನಗೆರವೊಂದನು ಕಾಣದವಗೆ ವಾ-
ಸನೆ ಮೊದಲಂದದೊಳಿರಲುಂಟೇ ೨

ಜ್ಞಾನದಿ ವಸ್ತುವನರಿದಿಹ ಸಮ್ಯ-
ಜ್ಞಾನಿಗೆ ಕರ್ಮದೆ ರತಿಯುಂಟೆ
ನಾನಾತ್ವವ ಪುಸಿಗಂಡಿಹ ನಿಜಸಂ
ಧಾನಿಗೆ ಸಂಸ್ಕೃತಿ ತಡೆಯುಂಟೇ
ತಾನೆ ತನ್ನಯ ಮೂಲವನರಿದಗೆ
ನಾನಾದೇವರು ನಿಜಮುಂಟೆ
ಮಾನಗಳೆಂಟನು ಮೀರಿಹನೆಂಬಗೆ
ಮೌನಸಮಾಧಿಯ ಬೆಡಗುಂಟೇ ೩

ಕನಸೆನ್ನುತೆ ವಿಶ್ವವ ನಗುವಾತಗೆ
ಜನದಪವಾದದಭಯವುಂಟೇ
ಬಿನುಗಿನ ತ್ರಿಪುಟಿಯ ಕಳೆದುಳಿದವನಿ-
ಗರ್ಚನೆ ಕಾಲಕ್ರಮದಳುಕುಂಟೇ
ತನಗೀವೃತ್ತಿಗಸಂಗತ್ವವ ತಿಳಿ-
ದನಿಗಘಪುಣ್ಯದ ತಗಲುಂಟೆ
ನೆನಹರತೇಕೋಭಾವದಿ ಮೈಮರೆ-
ದನಿಗೆ ನಿಷೇಧ ವಿಧಿಗಳುಂಟೇ ೪

ತರಣಿಯ ಪರಿಯಿಂದರಿದುರಿವನಿಗಾ
ವರಿಸುವ ಮರವೆಯ ತಮುಮುಂಟೆ
ಪರದೊಳುಮತಿ ನಿಶ್ಚಯಗೊಂಡಗೆ ಬಹು
ಪರಿ ಸಂಶಯದೆಳತಟಮುಂಟೇ
ನಿರವಯುವೆನೆ ತಾನಾದಗೆ ಹಿಂದಣ
ಪರಿಭವಪಾಶದ ಬಿಗುಹುಂಟೆ
ಗುರುಸಿದ್ಧೇಶನೆ ತಾನಹ ಮುಕ್ತಗೆ
ಸರಿ ತಾನಲ್ಲದೆ ಪೆರತುಂಟೇ ೫

## ಸಿರಿಯುನೆ ಕರುಣಿಸು ನಿನ್ನಯಿ

ರಾಗ—ಸಾರಂಗ

ಸಿರಿಯುನೆ ಕರುಣಿಸು ನಿನ್ನಯಿ । ಚರಣಾಬ್ಜವ ಬಹುಜನ್ಮಾಂ-
ತರದಿಂದಲಿ ಭಜಿಸಿದುದಕೆ । ಪುರಹರಾ ಎನಗಿಂಥ ಪಲ್ಲವಿ

ತನುಜಾನುಜರೆರಿಯದ ನೃಪರೆಳಸದ ತಸ್ಕರರೊಯ್ಯದ
ಕನಕಾದಿಗಳೆನಿಸದ ಖಳರಳುಪದ ರೂಪಿಸದ
ಮನೆಯೊಳಗಡಗದ ವಿವಿಧಗಳಾಗಿರದಿಂದ್ರಿಯಕೊದಗದ
ಮನಕಿದಿರಿಡದ್ರಣೆ ಸವೆಯದ ಮಮತೆಯನೊದವಿಸದ ೧

ಕ್ಷಣವಗಲದ ವೃದ್ಧಿಕ್ಷಯವಾಗದ ರಿಕ್ತರ್ ಬೇಡದ
ಗಣನೆಗೆ ಬರದಹಿ ಮರುಳಾಕ್ರಮಿಸದ ಸಂದಿರದ
ಗುಣಗಳ ಕೆಡಿಸದ ಲಯಭಯಗೊಳ್ಳದ ತನಗೊಂದಧಿಕವ-
ನೆಣಿಸದ ಪೊರೆಯಾಗದ ವಿಕ್ರಯಿಸದ ಮೊದಲಿರದ ೨

ಕಡೆಯೆಂದೆನಿಸದ ತಾತಿರದೆಡೆಯಿರದೆರವೊಂದಿಲ್ಲದ
ಪಿಡಿವೊಡೆಸಿಲ್ಕದ ತಿಳಿದೊಡೆ ಶೂನ್ಯಮಿದೆನಿಸಿರದ
ಕೊಡುವೆರೆವಿರ್ವರು ತಾನಾಗಿರದೀ ಸಿರಿಯುನೆ ನೀಂ
ಕೊಡದಿರೆ ನಿನ್ನವನಾಗೆನಪ್ರತಿಮಿತಗುರುಸಿದ್ಧಾ ೩

## ಶ್ರೀಗುರುವೆಂದೆಂಬ ವೈದ್ಯನೆನ್ನಯ ಭವ

ರಾಗ—ಶಂಕರಾಭರಣ

ಶ್ರೀಗುರುವೆಂದೆಂಬ ವೈದ್ಯನೆನ್ನಯ ಭವ-
ರೋಗಕೌಷಧವನಿತಿಂತ್ತು ಬದುಕಿಸಿದ ಪಲ್ಲವಿ

ಪರಿಪಕ್ವಮನವೆಂಬ ಧಾತುವಿಡಿದು ನೋಡಿ
ನೆರೆ ಸಾಧ್ಯವಹುದೆನ್ನು ತೊಳಗರಿದು
ಮರವೆ ದೋಷದೆ ಪುಟ್ಟ ಸೂಕ್ಷ್ಮಾಂಗಕಿದು ವೇಧಿ-
ಸಿರುತಜ ಸೃಷ್ಟಿಯಿಂ ಬಲಿದುದೆನ್ನುತೆ ಪೇಳಿ ೧

ಘನತತ್ತ್ವಮಸಿಯೆಂಬ ಚಂದ್ರೋದಯವನಿಟ್ಟು
ಮನವೆಂಬುವ ಪಥ್ಯವನ್ನೆ ಹಿಡಿಸಿ
ಘನುಪ ನಿದಿಧ್ಯಾಸದುಪಚಾರದಿಂ ಮುಕ್ತಿ-
ಯನುಪಮ ಸುಖವೆಂಬುವಾರೋಗ್ಯವನೆ ಮಾಡಿ ೨

ಮರುಕಳಿಸದು ಮುಂದಕೆಂದಿಗು ನಿನಗಿನ್ನು
ಮರಣವೆ ಇಲ್ಲವೆಂದಭಯವಿತ್ತು
ಬೆರೆದೇಕ ಮಯವಾದೆನ್ನುವನೆ ದಕ್ಷಿಣೆಗೊಂಡು
ಹರುಷಿಸಿ ಗುರುಸಿದ್ಧನಾಗೆಂದು ಹರಸುತ್ತೆ ೩

## ಮುಕ್ತಿಯೆಂಬುವುದೇನಸಾಧ್ಯವಲ್ಲವು ನಿತ್ಯ

ರಾಗ—ಶುದ್ಧಸಾವೇರಿ

ಮುಕ್ತಿಯೆಂಬುವುದೇನಸಾಧ್ಯವಲ್ಲವು ನಿತ್ಯ
ಮುಕ್ತನಾಗಿಹ ಪೂರ್ಣ ಬ್ರಹ್ಮನಿಷ್ಠನಿಗೆ ಪಲ್ಲವಿ

ಕಡುಲೋಭಿ ಧನವ ಬಚ್ಚಿಟ್ಟು ಮಾನಸದೊಳ-
ಗೊಡನೊಡನದನೆಣಿಸಿ ಕೊಂಬಂತೆ
ಪಡೆದು ಶ್ರೀ ಗುರವಿನಿಂ ತತ್ತ್ವಾರ್ಥವನು ತನ್ನೊ-
ಳಡಿಗಡಿಗದನೆ ಸದಾನಂದಿಸುವಗೆ ೧

ರತಿಕೇಳಿಯೊಳಗನುಭವಿಸಿದ ಸುಖಗಳ-
ನತಿಕಾಮಿ ಮನದೆ ನೆನೆದು ಹಿಗ್ಗುವಂತೆ
ಮತಿಯೊಳಗರಿದಂತರ್ಮುಖಿಯಾಗಿ ಪರತತ್ತ್ವ
ದತಿಶಯದನುಭವದೊಳು ರಮಿಸುವಗೆ ೨

ಎಳೆಗರುವಗಲ್ದು ಮೇಯಲು ಪೋದ ಹಸುವು ತ-
ನ್ನೊಳಗದನೆ ನೆನೆದು ಮೇವನೆ ತೊರೆವಂತೆ
ಕಳೆದು ಬಾಹ್ಯದ ವಿಷಯಗಳನು ಗುರುಸಿದ್ಧ-
ನೊಳು ಮನೋಲಯವಾಗಿ ಪರಿಣಮಿಸುವಗೆ ೩

## ಸುಷುಮ್ನೆ ಘನಮುಕ್ತಿಸುಖವನು ಬಯಸುತೆ

ರಾಗ—ಎರಕಲಕಾಂಬೋಧಿ

ಸುಷುಮ್ನೆ ಘನಮುಕ್ತಿಸುಖವನು ಬಯಸುತೆ
ದಿವ್ಯದಿರುಗಿ ಸಾಯದಿರು ಮಂದ ಮನುಜಾ ಪಲ್ಲವಿ

ಮುಕುರವ ಹಿಡಿದು ನಿಟ್ಟಿಸಿದಾಕ್ಷಣಕೆ ತನ್ನ
ಮುಖವದರೊಳು ಹೊಕ್ಕು ಪ್ರತಿಬಿಂಬಿಪಂತೆ
ಸುಖದಿ ತನ್ನಯೆ ನಿಜವನೆ ಪೇಳ್ವ ಶ್ರುತಿವಾಕ್ಯ-
ನಿರಕರದರ್ಥದೆ ನಿನ್ನ ಮತಿ ಹೊಕ್ಕು ಹೊಳೆಯದೆ ೧

ಕಳಶಕುಚದ ಕಾಂತೆಯರ ನೋಟದಲರಂಬು
ಎಳಜವ್ವನಿಗನೆರ್ದೆಯೊಳು ನಾಟುವಂತೆ
ತಿಳಿದನುಭವಗುರುವುಪದೇಶಿಸಿದ ವಾಕ್ಯ-
ಗಳ ಭಾವವದು ನಿನ್ನ ಮನದೊಳು ನೆಲಸದೆ ೨

ಕಾನನದೊಳಗಿದಿರಾದ ಹುಲಿಯು ಕಂಡು
ತಾನು ತನ್ನನು ಮರೆಯುವ ಪಾಂಥನಂತೆ
ಸ್ವಾನುಭಾವದೆ ಗುರುಸಿದ್ಧನಿರವ ನೋಡು-
ತಾನಂದದೊಳು ಮುಚ್ಚಿ ಪರವಶವೆರಸದೆ ೩

## ಯಾವ ಕೃತ್ಯದೊಳಿರುತಿರ್ದರು ಶಿವಯೋಗಿ

ರಾಗ—ಶಂಕರಾಭರಣ

ಯಾವ ಕೃತ್ಯದೊಳಿರುತಿರ್ದರು ಶಿವಯೋಗಿ
ಭಾವದೊಳಗೆ ಬ್ರಹ್ಮವನು ಬಿಡದಿಹನು ಪಲ್ಲವಿ

ಸ್ವರವಭಿನಯ ತಾಳ ರಸ ಭಾವಗಳನೊಂದಿ
ಸಿರದ ಕುಂಭವ ಮರೆಯದ ನಟಿಯಂತೆ
ಕರಣೇಂದ್ರಿಯಗಳ ವಿಷಯಭೋಗಪರನಾಗಿ
ಪರಮಾತ್ಮನುಳುಮೆಯೆಚ್ಚರದಪದಿಹನು ೧

ಮನೆಗೆಲಸಗಳ ಮಾಡುತಲಿರ್ದು ಸಂಕೇತ
ದಿನಿಯನ ನೆನಸುತಿರುವ ಪಾಣ್ಬೆಯಂತೆ
ತನುಧನವನಿತಾದಿ ಸಂಸಾರವನು ಹೊಂದಿ
ಮನದೊಳಾತ್ಮನ ಲಕ್ಷವ ಬಿಡದಿಹನು ೨

ಮೆರೆವೆಳುತೆರದ ವಿದ್ಯೆಯನು ಸಾಗಿಸುತೆ ಬೆನ್ನ
ಹರಳನೆಣಿಸಿಕೊಂಬುವವಧಾನಿಯಂತೆ
ಹೊರಗೆ ಸಕಲ ಲೋಕವ್ಯವಹಾರದೊಳಗಿರ್ದು
ಗುರುಸಿದ್ಧನನುಸಂಧಾನದೆ ಬೆರೆದಿಹನು ೩

## ಶಿವಯೋಗಿ ಸಕಲ ಸಂಸಾರದೊಳಗಿರ್ದೊಡೇ

ರಾಗ—ನಾದನಾಮಕ್ರಿಯೆ

ಶಿವಯೋಗಿ ಸಕಲ ಸಂಸಾರದೊಳಗಿರ್ದೊಡೇ-
ನವಿವೇಕಿಯಂತೆ ಮೋಹಿಸಿ ಕೆಡುವುದುಂಟೇ ಪಲ್ಲವಿ

ಪಸಿಯ ಕಾಯ್ ಲವಣವುಂಬಂತೆ ಲೋಕಭ್ರಮೆಯೊ-
ಳೊಸೆದು ತನ್ಮಯನಾದ ಮೂಢನಂತಿರದೆ
ಕೆಸರಿನೊಳಗಾಡುತಿಹ ಕುಂಬಾರ ಹುಳುವಿನಂ-
ತೆಸೆದು ಲೌಕಿಕಪ ಸೋಂಕಿಯು ಸೋಂಕದಿರವ ೧

ಜಲಮಗ್ನವಸ್ತ್ರದಂತಖಿಲಾವಲಂಬನಗ-
ಳೊಳಹೊರಗುವೇಧಿಸಿರುವ ಬದ್ಧನಂತಿರದೆ
ನಳಿನದೆಲೆ ಜಲದೆ ಮುಳುಗಿರ್ದು ನೆನೆಯದ ತೆರದೆ
ತಿಳಿದು ಸಂಸೃತಿಯ ಹೊಂದಿಯು ಹೊಂದದಿರುವ ೨

ಇಂದ್ರಜಾಲಕ್ಕೊಲಿವನಂತೀ ಪ್ರಪಂಚ ನಿಜ-
ವೆಂದು ನಂಬಿರುವ ಜಡಜೀವಿಯಂತಿರದೆ
ಇಂದ್ರಜಾಲವತೋರ್ಪನಂತಖಿಳವಿದು ಮಿಥ್ಯೆ
ಯೆಂದರಿದು ಗುರುಸಿದ್ಧನಡಿಯನೆಡವಿಡದ ೩

## ಯೋಗೀಶನ ಸಿರಿಗೆಣೆಯುಂಟೆ । ಮಿಕ್ಕ

ರಾಗ—ಪಂತುವರಾಳಿ

ಯೋಗೀಶನ ಸಿರಿಗೆಣೆಯುಂಟೆ । ಮಿಕ್ಕ
ಭೋಗಿಗಳಣುಸಿರಿಯನು ನೋಡಲಹಹಾ ಪಲ್ಲವಿ

ನಳಿನಜಾಂಡವೆ ಗೇಹವಿಳೆಯೊಂದೆ ಮಂಚವು
ಹೊಳೆವ ದಿಕ್ಕುಗಳೆಂಟು ಪರದೆಗಳು
ಕುಳಶೈಲಮುಪಧಾನಮಭ್ರವೇ ಮೇಲ್ಕಟ್ಟು
ತೊಳಪ ತಾರೆಯೆ ಪುಷ್ಪಗುಚ್ಛಗಳಹಹಾ ೧

ತರಣೀಂದುಗಳೆ ನಿತ್ಯಕರದೀಪಯುಗಳವು
ಚರಿಪ ವಾಯುವೆ ತಾಳವೃಂತಕವು
ಉರಿವ ದಾವಾಗ್ನಿಯೆಲ್ಲವು ಕುಮ್ಮಟಂಗಳು
ಮೆರೆವಾರುರುತಗಳೆ ಸೇವಕರಹಹಾ ೨

ಧರೆಯ ಮಹಾರಣ್ಯವೆಲ್ಲ ಜೇವಣಶಾಲೆ
ಶರಧಿ ವಾಪಿನಳೆ ಭೃಂಗಾರಂಗಳು
ಹರಿಯದ್ಯೆಸಿರಿಯಿದನುಣುತೆ ಶ್ರೀಗುರುಸಿದ್ಧ-
ನಿರವಾದ ಯತಿಯೆ ಮೂಜಗದಾಣ್ಮನಹಹಾ ೩

## ನೋಡಿ ಪರಂಜ್ಯೋತಿಯು ಬೆಳಗುತ್ತಿದೆ

ರಾಗ—ಲಲಿತೆ (ಪರಿವರ್ಧಿನಿ ಷಟ್ಪದಿ)

ನೋಡಿ ಪರಂಜ್ಯೋತಿಯು ಬೆಳಗುತ್ತಿದೆ
ರೂಢಿಯೊಳಂತರ್ಮುಖಿಗಳು ಮುಚ್ಚಿದ
ಮೂಢತೆಯೆಂಬುವಯವೆದೆರೆದೂರ್ಧ್ವಜ್ಞಾನಾಂಬಕದಿಂದೆ ಪಲ್ಲವಿ

ಸತ್ತೆನಿಸುತೆ ಜಗದಗಲಕೆ ಪರ್ಬಿದ
ಬತ್ತಿಯು ಕೊನೆಯನೆ ಹಿಡಿದುಜ್ವಲಿಸುತೆ
ಚಿತ್ತೆಂದೆನಿಪಭಿತೋಮುಖ ಶಾಂತಜ್ವಾಲಾಮಯವಾಗಿ
ಮತ್ತಾನಂದವೆ ತೈಲವದಾಗಿರೆ
ನಿತ್ಯವೆನಿಪ ಕರಣಂಗಳ ವೇಷ್ಟಿಸಿ
ಸುತ್ತಲು ಪರಿಪೂರ್ಣತೆಯೆಂದೆಂಬುವ ಪ್ರಭೆಯನೆ ಪಸರಿಸುತೆ ೧

ಪರಿದಿಹ ಮಾಯಾತಿಮಿರವ ನೋಡಿಸಿ
ನೆರೆ ಸಂಸೃತಿಯೆಂಬುವ ಧೂಮಾಂಕುರ-
ವೆರಸದೆ ಕಾಲಕ್ರಮವೆಂಬನಿಲನ ಹತಿಯಿಂದಲಿ ಕೆಡದೆ
ಎರಗುವ ತೃಷ್ಣಾಶಲಭನ ದಹಿಸುತೆ
ಕರಣೇಂದ್ರಿಯದಣುಗತಿಗಲ್ಲಾಡದೆ
ಮೆರೆವ ಧರಾದಿ ಶಿವಾಂತ ಜಡಾಜಡದೃಶ್ಯವ ತೋರಿಸುತೆ ೨

ಮರುತಸಖಂ ತಾರಾಪತಿ ತಾರಕಿ
ತರಣಿ ತಟಿತ್ತುಗಳೆಂಬುವ ತೇಜ-
ಸ್ಫುರಣೆಗಳೆಲ್ಲವು ನಿಜಭಾಸಾಂಶದ ಲವದೊಳು ಲವವೆನಿಸಿ
ನಿರುಪಮ ನಿರ್ಗುಣ ನಿತ್ಯ ನಿರಂಜನ
ನಿರಘ ನಿರಾಮಯ ಗುರುಸಿದ್ಧೇಶ್ವರ-
ನಿರವಾದುದರಿಂ ತಾನಾರಿಂದಲುಮೊದಲುದಯಿಸಿಕೊಳದೆ

॥ ಸಮಾಪ್ತಂ ॥

